# ನೂರು ರೂಪಾಯಿ ನೋಟು




•

ಗೋಪಾಲಕೃಷ್ಣ ಪಿ. ನಾಯಕ

•

ಸಾಹಿತ್ಯ ಭಂಡಾರ, ಹುಬ್ಬಳ್ಳಿ

ಪ್ರಕಾಶಕರು :
**ಶ್ರೀಮತಿ ಮುಕ್ತಾದೇವಿ ಗೋಪಾಲಕೃಷ್ಣ ನಾಯಕ**
" ವಿಜಯ ಭಾರತಿ " ಅಂಕೋಲೆ ( ಉತ್ತರ ಕನ್ನಡ )

ಪ್ರತಿಗಳು ದೊರೆಯುವ ಸ್ಥಳ:
**ಸಾಹಿತ್ಯ ಭಂಡಾರ, ಹುಬ್ಬಳ್ಳಿ**



೧೯೫೯

ಬೆಲೆ : **೦-೫೦**

**ಸೂಚನೆ:**

ಈ ನಾಟಕವನ್ನು ಅಭಿನಯಿಸಲಪೇಕ್ಷಿಸುವವರು ಮುಂಚಿತವಾಗಿ ಲೇಖಕರ ಅನುಮತಿಯನ್ನು ಪಡೆಯಬೇಕು. ಆ ಬಗ್ಗೆ **ಗೋಪಾಲಕೃಷ್ಣ ಪಿ. ನಾಯಕ, ಅಂಕೋಲೆ** (ಉತ್ತರ ಕನ್ನಡ) ಎಂಬ ವಿಳಾಸಕ್ಕೆ ಪತ್ರವ್ಯವಹಾರ ನಡೆಸಬೇಕು. ಇನ್ನು ಮುಂಚಿತ ಅನುಮತಿ ಪಡೆಯದೆ ಅಭಿನಯಿಸಿದಲ್ಲಿ ಲೇಖಕನ ಸಂಭಾವನೆ ಇತ್ಯಾದಿ ನಷ್ಟಗಳಿಗೆ ಗುರಿಯಾಗಬೇಕಾಗುವುದು.

ಮುದ್ರಕರು :
ಹ. ರಾ. ಪುರೋಹಿತ
**ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ**

# ನನ್ನ ನುಡಿ

"ನೂರು ರೂಪಾಯಿ ನೋಟು"—ನನ್ನ ನಾಟಕ ಕೃತಿಗಳಲ್ಲಿ ನಾಲ್ಕನೆಯದಾಗಿದೆ. ಇದು ವರೆಗಿನ ನನ್ನ ಕೃತಿಗಳಿಗೆ ಜನತೆ ನೀಡಿದ ಹುರುಪು, ವಿಮರ್ಶಕರು ತೋರಿದ ವಿಶ್ವಾಸ, ಪ್ರಕಾಶಕರು ಕರುಣಿಸಿದ ಸಹಕಾರ, ಇವೆಲ್ಲವುಗಳ ಬಗ್ಗೆ ಕೃತಜ್ಞತೆಗಳನ್ನು ಸೂಚಿಸಿ ಈ ಪುಟ್ಟ ಪ್ರಕರಣಾತ್ಮಕ ಏಕಾಂಕವನ್ನೂ ಅದೇ ಭಾವದಿಂದ ಸ್ವಾಗತಿಸುವಿರೆಂದಾಗಿ ನಂಬಿ ನಿಮ್ಮ ಮುಂದಿಡುತ್ತಿದ್ದೇನೆ.

Hugh Chestermanರ ನಾಟಕವೊಂದರ ರೂಪಾಂತರ ಈ ಕೃತಿ. ಅನ್ಯ ಭಾಷೆಗಳಲ್ಲಿ ಹೆಸರಾದ ನಾಟಕಗಳ ಕಥಾವಸ್ತುಗಳನ್ನು ನಮ್ಮ ನಡೆ-ನುಡಿಗಳಿಗೆ ಯೋಗ್ಯರೀತಿಯಿಂದ ಹೊಂದಿಸಿಕೊಂಡು-ಅಸಹಜತೆಗೆ ಎಡೆಗೊಡದೆ ರೂಪಿಸಬಹುದಾದಲ್ಲಿ-ಅಂಥವುಗಳನ್ನು ಕನ್ನಡ ಜನತೆಗೆ ನೀಡಿ ಅವುಗಳಲ್ಲಡಗಿದ ತತ್ವ, ಸತ್ಯ, ನವ-ದೃಷ್ಟಿ, ಹೊಸ ಬಗೆ ಬೆಡಗುಗಳನ್ನು ಕಾಣಿಸಬೇಕೆಂಬುದೇ ನನ್ನ ಹಂಬಲ. ಅಪಕ್ವವಾದ ಸ್ವಂತ ಕೃತಿಗಳಿಗಿಂತ ಇಂಥ ರೂಪಾಂತರಗಳಿಂದ ನಮ್ಮ ನಾಟಕರಂಗ ಹೆಚ್ಚು ಬಲಗೊಳ್ಳುವುದೆಂಬ ಭರವಸೆ ನನಗಿದೆ.

ಈ ಪುಸ್ತಕವನ್ನು ಪ್ರಕಟಿಸುವಾಗ ಸಹಾಯ ನೀಡಿದ್ದಲ್ಲದೆ ಮುಖ್ಯ ಮಾರಾಟದ ಹೊಣೆ ಹೊತ್ತ ಹುಬ್ಬಳ್ಳಿಯ ಸಾಹಿತ್ಯ ಭಂಡಾರದ ಸಂಚಾಲಕರಿಗೆ ನಾನು ವಿಶೇಷ ಋಣಿಯಾಗಿದ್ದೇನೆ. ಹಸ್ತಪ್ರತಿ ತಯಾರಿಸುವಲ್ಲಿ ತಾವಾಗಿಯೆ ಮುಂದೆ ಬಂದು ನೆರವಾದ ಕುಮಾರಿ ಪಾರ್ವತಿ ಮತ್ತು ಕುಮಾರ ಶಿವಾನಂದರಿಗೆ ಅಭಿನಂದನೆಗಳು. ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯಕ್ಕೂ ಅನಂತ ವಂದನೆಗಳು.

ಅಂಕೋಲೆ
೧೧—೧—೧೯೫೫

ಗೋಪಾಲಕೃಷ್ಣ ಪಿ. ನಾಯಕ

# ಮುನ್ನುಡಿ

ನಾಯಕನ ನಾಟಕವಿದು. ನಾಯಕನು ನಟನಾಯಕ, ರಂಗ-ನಾಯಕ. ರಂಗದ ಅವಶ್ಯಕತೆಯನ್ನು ಚೆನ್ನಾಗಿ ಬಲ್ಲ ಪ್ರಸ್ತುತ ಗ್ರಂಥಕರ್ತ ಬರೆದ ನಾಟಕ ಕೃತಿಗಳಲ್ಲಿ "ನೂರು ರೂಪಾಯಿ ನೋಟು" ಎಂಬುದು ನಾಲ್ಕನೆಯದು.

ನಾಯಕನ ಭಾಷೆ ಹೊಸಗನ್ನಡಕ್ಕೆ ಒಳ್ಳೆಯ ಮಾದರಿ. ನಾಟಕದ ಪಾತ್ರಗಳು ಕೇವಲ ಹಳೆಯ ಮೈಸೂರು ಗ್ರಾಮ್ಯವನ್ನೂ ಬಳಸವು, ಕೇವಲ ಬಯಲುಸೀಮೆಯ ಗ್ರಾಮ್ಯವನ್ನೂ ಬಳಸವು. ಇವೆರಡರ ಸುಂದರ ಸಮನ್ವಯವು ಈ ನಾಯಕ ಭಾಷಾಶೈಲಿಯಲ್ಲಿದೆ. ಜೊತೆಗೆ, ಗ್ರಾಂಥಿಕತೆ—ಆಡುಮಾತುಗಾರಿಕೆಗಳ ನಡುವಣ ಸುಮಾರ್ಗವನ್ನು ಹಿಡಿದು ಸಾಗುವ ಸಂವಾದಕ್ರಮವಾದರೂ ಶುಚಿಯಾಗಿದೆ, ರುಚಿಯಾಗಿದೆ. ಇಲ್ಲಿ ಛಾಯಾಮಾತ್ರವಾಗಿ ಅನುವಾದಿಸಲ್ಪಟ್ಟ 'ನೂರು ರೂಪಾಯಿ ನೋಟಿ'ನ ವಸ್ತು ಆಧುನಿಕ. ಸಾಮಾಜಿಕ ವ್ಯವಹಾರವೊಂದು ಅರ್ಥನಿಷ್ಠವಾಗಿ ಆಡಳಿತ ಯಂತ್ರದಲ್ಲಿ ಹೊಕ್ಕುಹೊರಡುವ ಮಾದರಿಯೊಂದು ಇದರಲ್ಲಿದೆ.

ನೂರು ರೂಪಾಯಿ ನೋಟೇ ಈ ನಾಟಕದ ಸೂತ್ರಧಾರಿತ್ವವನ್ನು ವಹಿಸಿದೆ. ಅದರ ಆಗುಹೋಗುಗಳ ದೆಶೆಯಿಂದ ಮನುಷ್ಯ ಪಾತ್ರಗಳ ಹೃದಯಸಮುದ್ರದಲ್ಲಿ ವಿವಿಧ ರಂಗಸ್ತರಂಗಗಳೇಳುವುದನ್ನು ನಾವಿಲ್ಲಿ ಕಾಣಬಹುದು.

ಅಸಮರ್ಥನೀಯ ಕಾರ್ಯದಕ್ಷತೆಯಿಂದ ಸ್ವದೇಶದ ಅಧಿಕೃತ ರಕ್ಷಣಾಧಿಕಾರವುಳ್ಳ ಕಾರ್ಯಪಾಲಿಕೆಗಳ ನ್ಯಾಯನಿರ್ಣಯವು ಜನರಿಗೆ ಅಲ್ಲಿ ಇಲ್ಲಿ ಬೇಸರಬರಿಸುತ್ತಿರುವ ಇಂದಿನ ಕಾಲದಲ್ಲಿ ನಿರಪರಾಧಿ—

ಅಪರಾಧಿಗಳು ಪರಸ್ಪರ ಸ್ಥಾನಾಂತರ ಹೊಂದುವ ಸಂಭವ ಹೆಚ್ಚು ತ್ತಿರುವ ಅನುಭವದ ಪ್ರತಿಬಿಂಬವನ್ನು ನಾಟಕ ಸಮರ್ಥವಾಗಿ ತೋರಿ ಸುತ್ತದೆ. ಸ್ವರಾಜ್ಯವು ಸುರಾಜ್ಯದ ಸಾಧನವಾದಾಗ ಮಾತ್ರ ಸಮರ್ಥ ನೀಯವಾಗುವುದನ್ನು ದಿನೇ ದಿನೇ ಮನಗಾಣುತ್ತಿರುವ ಪ್ರೇಕ್ಷಾ ವಂತರಿಗೆ ನಾಟಕದ ವಾಸ್ತವಿಕತೆ ಹೃದ್ಯವಾಗದಿರದು.

ಪಾತ್ರಗಳ ಸ್ವರೂಪಗಳಾದರೂ ನಿತ್ಯಜೀವನದಲ್ಲಿ ನಾವಿಂದು ಕಾಣ ತಕ್ಕವೇ ಆಗಿರುವುದು ರಸತಲ್ಲೀನರಾಗಲು ರಸಿಕರಿಗೆ ಬಹಳ ಅನು- ಕೂಲ ಮಾಡಿಕೊಟ್ಟಿದೆ. ಮೋಹನನ ಅಜಾಗರೂಕತೆಯು ನಾರಾ- ಯಣನ ಕೊರಳಿಗೆ ಉರುಲಾಗಲು ಯತ್ನಿಸಿದ್ದು ನಾಟಕದ ಕಾರ್ಯ ಮಾಲೆ ಬೆಳೆಯುತ್ತ ಹೋಗಲು ಸಹಕಾರಿಯಾಗಿದೆ. ಆದುದರಿಂದ ನಾಟಕದ ಕಾರ್ಯಗತಿ ಎಲ್ಲಿಯೂ ಕುಂಟುವಂತಾಗಿಲ್ಲ. ನಾರಾಯಣನೇ ಇಲ್ಲಿ ಪ್ರೇಕ್ಷಕರ ರಸಾವಲಂಬನ. ಅವನು ಅಡಿಗೆಯ ಭಟ್ಟ—ಅವನೇ ಭಟ್ಟನಾಯಕ! 'ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ' ಎಂಬ ಸೂತ್ರದಂತೆ ಅವನು ಗಣ್ಯ. ಅವನ ನಿರಪ ರಾಧಿತ್ವದ ಸ್ಥಾಪನೆಯೇ ಪ್ರೇಕ್ಷಕರ ಜಯಾಸ್ವಾದ.

ಮೋಹನನು ನಿಜವಾದ ಖಳನಲ್ಲ. ಆದುದರಿಂದ ಈ ನಾಟಕ ವೊಂದು Comedy of Error—ಅಜಾಗರೂಕತೆಯಿಂದ ಅರಿಷ್ಟ ವೊದಗಿ ಅಂತ್ಯದಲ್ಲಿ ಅರಿಷ್ಟ ಪರಿಹಾರವಾದ ಪ್ರಕರಣ—ಎನ್ನಿಸಿದೆ ಎನ್ನಬಹುದು. "ಸಂತಃ ಪರೀಕ್ಷ್ಯ ಅನ್ಯತರದ್‌ಭಜಂತೇ'' ಎಂಬುದು ನಾಟಕದ ಕಾಂತ ಸಂಮಿತಿ. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕೆಂಬುದು ಯಾವಾಗಲೂ ಸತ್ಯವಲ್ಲವೇ ?

ಸಾಮಾನ್ಯನು ಗುಣ ಬಲದಿಂದ ಮಾನ್ಯನೆಂದು ಗ್ರಹಿಸುವ ಶುದ್ಧ ನಾಗರಿಕತೆಯ ಆದರ್ಶವನ್ನು ಆಧುನಿಕ ಸಮಾಜಕ್ಕೆ ಈ ನಾಟಕ ಸಾರಿ ಹೇಳಬಲ್ಲುದಾಗಿದೆ. ಕಸುಬುಗಳಲ್ಲಿ ನಿಂದ್ಯ ವಂದ್ಯ ಭೇದಗಳನ್ನು ಗಣಿಸಬಾರದೆಂಬ ನಾವು ವ್ಯವಹಾರದಲ್ಲಿ ಆ ಪ್ರಕಾರ ನಡೆದುಕೊಳ್ಳ ದಿರುವ ದೋಷವನ್ನು ಈ ಕೃತಿ ಎತ್ತಿತೋರಿಸಬಲ್ಲುದಾಗಿದೆ. ತಪ್ಪೊಪ್ಪಿಕೊಂಡೇ ಮಹಾತ್ಮರಾದ ಗಾಂಧಿಯವರ ನೆನಪನ್ನು ಮೋಹ

ನಸು ನಮಗೆ ತಂದುಕೊಡುವುದಾದರೂ ಸ್ಮರಣೀಯವಾಗಿದೆ. Conscience is its own readiest accuser— ಆತ್ಮ ಸಾಕ್ಷಿಯು ಎಲ್ಲರಿಗಿಂತ ಮೊದಲು ತನ್ನನ್ನು ತಾನೇ ದೂರಿಕೊಳ್ಳುವ ಪದಾರ್ಥ. ಅದಿಲ್ಲದವರ ಸಂಖ್ಯೆ ನಮ್ಮ ದೇಶದಲ್ಲಿಂದು ಬೆಳೆಯು ಲಾರಂಭಿಸಿರುವಾಗ ಈ ಪಾತ್ರವಾದರೂ ಪರೋಕ್ಷ ಸಮಾಜ—ಶಿಕ್ಷಕ ನೆನ್ನಬೇಕು !

ಒಟ್ಟಿನಲ್ಲಿ ಪ್ರೇಮ—ಪರಾಕ್ರಮಗಳ ಪ್ರಾಧಾನ್ಯವಿಲ್ಲದೆ ಕರುಣೆ—ಕಳವಳ—ಸತ್ಸಂತೃಪ್ತಿಗಳ ಬಲದಿಂದಲೇ ರಂಜಕವಾದ ಈ ನಾಟಕ ವನ್ನು ಕನ್ನಡ ಜಾಣರು ಆದರದಿಂದ ಸ್ವಾಗತಿಸದಿರರು. ಇದೊಂದು ಪುಟ್ಟ ಪ್ರಕರಣಾತ್ಮಕ ನಾಟಕ. ಇದು ಇಷ್ಟು ಕೊಟ್ಟರೆ ಸಾಕು.

ಕುಮಟಾ
೩—೧೨—೫೮

ಬಿ. ಎಚ್. ಶ್ರೀಧರ



## ಪಾತ್ರಗಳು

| | |
|---|---|
| ಕಮಲಮ್ಮ | ದತ್ತ ಮಾವ |
| ಸುಂದರರಾಯ | ನಾಗತ್ತೆ |
| ನಾಖಿಳ್‌ಕರ್ (C I.D.) | ರಾಮು |
| ಮೋಹನ | ಸೋಮು |
| ನಾರಾಯಣ | ಜಾಫರ್ |
| | ಭಾಗೀರತಿ |

# ನೂರು ರೂಪಾಯಿ ನೋಟು

## ದೃಶ್ಯ—೧

[ ಸುಂದರರಾಯರ ಮನೆ; ಸುಸಜ್ಜಿತವಾಗಿ ಅಲಂಕರಿಸಲ್ಪಟ್ಟಿದೆ ಹಿಂದುಗಡೆ ಟೇಬಲ್ಲಿನ ಮೇಲೆ ಟೆಲಿಫೋನ್ ಮತ್ತು ಕೆಲವು ಪುಸ್ತಕ ಗಳು ಕಾಣಿಸುತ್ತಿವೆ. ಎದುರಿನಲ್ಲಿ, ಎಡಕ್ಕೆ, ಬಲಕ್ಕೆ, ಹೀಗೆ ಮೂರು ಬಾಗಿಲುಗಳಿವೆ. ತೆರೆ ಸರಿದಾಗ ಕಮಲಮ್ಮ ಹೆಣಿಗೆ ಹಾಕುತ್ತ ಖುರ್ಚಿಯಲ್ಲಿ ಕುಳಿತಿದ್ದಾರೆ ಸುಂದರರಾಯರು ಚಿಂತಾ ತುರಭಾವದವರಾಗಿ ಅತ್ತಿಂದಿತ್ತ ಶತಪಥ ಸುತ್ತುತ್ತಿದ್ದಾರೆ ಶ್ರೀ ನಾಖಳ್‌ಕರರು ಟಿಪ್ಪಣಿಯನ್ನು ಬರೆದುಕೊಳ್ಳುತ್ತಿದ್ದಾರೆ.]

**ಕಮಲಮ್ಮ :** ಅದೆಲ್ಲ ಸರಿ....ನೀವು ನಿನ್ನೆ ಅದನ್ನು ಇಲ್ಲಿಯೇ ಇಟ್ಟ ಬಗ್ಗೆ ನಿಮಗೆ ನಿಶ್ಚಯವಾಗಿ ನೆನಪಿದೆ ತಾನೇ ? ಅಥವಾ........

**ಸುಂದರರಾಯ*:** ಅಥವಾ ಏನು ? ಅಷ್ಟೂ ನೆನಪಿಲ್ಲವೇ ನನಗೆ ? ನನ್ನ ಹೆಸರು ಸುಂದರರಾಯ ಎನ್ನುವುದು ಈಗ ಎಷ್ಟು ನಿಶ್ಚಯವಾಗಿ ನೆನಪಿದೆಯೋ ಅಷ್ಟೇ ಸತ್ಯವಾಗಿ ಅದು ಕೂಡ ನೆನಪಿದೆ. ಇದೇ ಕೋಣೆ ಯಲ್ಲಿ ...ಇದೇ ಟೇಬಲ್ಲಿನ ಮೇಲೆ........ಈ ಗಡಿ- ಯಾರದ ಪಕ್ಕದಲ್ಲೇ ಇಟ್ಟಿದ್ದೆ. ನಿನ್ನೆ ಪೋಸ್ಟಿನಿಂದ ಇದರ ಸಂಗಡ ಬಂದ ಕಾಗದ ಕಾರ್ಖಾನೆಯ ಪತ್ರ, ನಿಮ್ಮ ದತ್ತಣ್ಣನಿಂದ ಬಂದ ಟೆಲಿಗ್ರಾಮ್ ಮತ್ತು ವಾರ ಪತ್ರಿಕೆ ಎಲ್ಲವನ್ನೂ ಅಲ್ಲೇ ಇಟ್ಟಿದ್ದೆ....ಇವೆಲ್ಲ

ಕಳೆದುಹೋಗಿದ್ದರೆ ಪರಿವೆಯೇ ಇರಲಿಲ್ಲ. ಆದರೆ ಆ ನೂರು ರೂಪಾಯಿಯ ನೋಟು ಮಾತ್ರ ಕಳ ವಾಗಿದೆಯೆಂದರೆ........ ಈಗಿನ ಕಾಲದಲ್ಲಿ ಹಣವನ್ನು ಕೂಡಿಹಾಕಬೇಕು........ ಹೊರತು ಕಳೆದುಕೊಳ್ಳ ಬಾರದು. ಅಲ್ಲವೇನ್ರಿ—C. I. D. ?

**ಸಾಖಳ್ ಕರ್ :** ಅದು ನಿಜ ಅನ್ನಿ. ಈ ಹಣ ಕಳೆದು ಹೋಯಿತು—ಎಂದು ನಿಮಗೆ ಯಾವಾಗ ತಿಳಿದು ಬಂದಿತು.

**ಸುಂದರರಾಯ :** ಇದೇ ಈಗ—ಒಂದು ಗಂಟೆ ಪೂರ್ವದಲ್ಲಿ. ತಡಮಾಡದೆ ಮರುಕ್ಷಣವೇ ನಿಮಗೆ ಫೋನ್ ಮಾಡಿದೆ ನಾನು.... ಹಣ ಕಳವು ಆಗಿದೆ ಎನ್ನುವುದು ನನ್ನ ಮನಸ್ಸಿಗೆ ಖಾತ್ರಿಯಾಗಿದೆ. ಅದರಿಂದ ಆದಷ್ಟು ಜಾಗ್ರತೆ ನಿಮಗೆ ರಿಪೋರ್ಟು ಕೊಟ್ಟಲ್ಲಿ ಕಳ್ಳನನ್ನು ಕಂಡುಹಿಡಿಯುವುದು ಸುಲಭವಾಗಬಹುದೆಂದು ಕೂಡಲೆ ನಿಮ್ಮನ್ನು ಕರೆಯಿಸಿಕೊಂಡೆ. ಇಂಥ ಕಾರ್ಯ ದಲ್ಲಿ ಹೊತ್ತುಕಳೆಯುವುದೆಂದರೆ ಮೂರ್ಖತನ, ಅಲ್ಲವೆ ?

**ಸಾಖಳ್ ಕರ್ :** ಅದು ಸರಿ ಸ್ವಾಮಿ.... ನನಗೆ ಈಗ ವಿವರಗಳ ಅವಶ್ಯಕತೆ ಇದೆ. ಅದರಿಂದ ದಯಮಾಡಿ ನಾನು ಕೇಳುವ ಕೆಲವು ಪ್ರಶ್ನೆಗಳಿಗೆ ಉತ್ತರಿಸಬೇಕು.

(ಬರೆದುಕೊಳ್ಳಲು ಸನ್ನದ್ಧನಾಗುವನು.)

**ಸುಂದರರಾಯ :** ಬೇಕಾದಷ್ಟು ಪ್ರಶ್ನೆಗಳನ್ನು ಕೇಳಿರಿ.

(ಕೂರುವರು.)

**ಸಾಖಳ್ ಕರ್ :** ಈ ಹಣ ಪೋಸ್ಟಿನಿಂದ ಬಂದಿತ್ತು ಅಂದಿ-

ರಲ್ಲ ? ಯಾವಾಗ ಬಂದಿತ್ತು ?

**ಕಮಲಮ್ಮ :** ನಿನ್ನೆ ಮುಂಜಾನೆಯ ಪೋಸ್ಟಿನಿಂದ ಇನ್ಲ್ಯಾಂಡ್ ಪತ್ರವಾಗಿ ಬಂದಿತ್ತು. ಇವರು ಪೋಸ್ಟನ್ನು ತೆಗೆದು ಕೊಂಡು ಪತ್ರವನ್ನು ಬಿಚ್ಚಿದಾಗ ನಾನು ಎದುರಿ ನಲ್ಲಿಯೇ ಇದ್ದೆ.

**ಸಾಖಳ್‌ಕರ್ :** ಸರಿ....ಯಾರು ಕಳಿಸಿದ್ದರು ? ಎಲ್ಲಿಂದ?

**ಸುಂದರರಾಯ :** ಅದೆಲ್ಲ ಬೇಕೆ ?

**ಸಾಖಳ್‌ಕರ್:** ಅದರಲ್ಲಿ ಏಕೆ ಮುಚ್ಚುಮರೆ? ತಪಾಸಣೆಯನ್ನು ಪ್ರಾರಂಭಿಸುವ ಪೂರ್ವದಲ್ಲಿ ಸವಿಸ್ತಾರ ಮಾಹಿತಿ ಯನ್ನು ಅವಶ್ಯವಾಗಿ ನಾವು ತಿಳಿದಿರಲೇಬೇಕು.

**ಸುಂದರರಾಯ :** ಆಗಲಿ....ನಮ್ಮ ಒಕ್ಕಲಿಗ ಹನುಮಂತಯ್ಯ ಕಳಿಸಿದ್ದ ಕಳೆದೂರಿಂದ.

**ಸಾಖಳ್‌ಕರ್ :** ( ಬರೆದುಕೊಳ್ಳುತ್ತಾ ) ಕಳೆದೂರು ? ಹೊಸ ಹೆಸರನ್ನೇ ಕೇಳುತ್ತಿದ್ದೇನೆ. ಎಲ್ಲಿದೆ ಈ ಊರು ?

**ಸುಂದರರಾಯ :** ದುಡ್ಡೂರು ಹತ್ತಿರ ಬಿಟ್ಟಳ್ಳಿ ಇದೆಯಲ್ಲ.... ಇದಕ್ಕೆ ಹೊಂದಿದ ಹಳ್ಳಿಯೆ ಕಳೆದೂರು.

**ಸಾಖಳ್‌ಕರ್ :** ಕಳೆದೂರು ...ಚೆನ್ನಾಗಿಯೆ ಇದೆ ಹೆಸರು.... ಕಳೆದ ನೂರು ಎಂದಿದ್ದರೆ ಈ ಸಂದರ್ಭಕ್ಕೆ ಇನ್ನೂ ಚೆನ್ನಾಗಿ ಒಪ್ಪುತ್ತಿತ್ತು. ಅದಕ್ಕೆ ( ನಗುವನು ) ಕ್ಷಮಿಸಿ....ತಮಾಷೆ ಮಾಡುತ್ತಿದ್ದೇನೆ ಎಂದು ಕೋಪಿಸಿಕೋಬೇಡಿ. ಎಂತಹ ಸಮಯದಲ್ಲಾದರೂ ನಗ್ತಾ ಇರಬೇಕೆಂದೇ ನನ್ನ ಮತ. ಇರಲಿ. ನಿನ್ನೆ ಮುಂಜಾನೆ ನಿಮ್ಮ ಕೈ ಸೇರಬೇಕಾದರೆ ಆ ಪತ್ರ ವನ್ನು ಮೊನ್ನೆ ಪೋಸ್ಟ್ ಮಾಡಿರಬೇಕು. ಕಳೆದೂರಿ

ನಿಂದ....ಅಲ್ಲವೇ ? ಪೋಸ್ಟಿನ ಮುದ್ರೆ ಸರಿಯಾಗಿ ದ್ದದ್ದು ಏನಾದರೂ ಜ್ಞಾಪಕವಿದೆಯೇ ?

**ಸುಂದರರಾಯ :** ಯಥಾಪ್ರಕಾರ ಬಲಗಡೆಯ ಮೇಲಿನ ಮೂಲೆಯಲ್ಲಿ ಮುದ್ರೆ ಇತ್ತು. ಸ್ಟ್ಯಾಂಪು, ತಾರೀಕು ಎಲ್ಲ ಸರಿಯಾಗಿಯೇ ಇರಬಹುದು.

**ಸಾಖಳ್‌ಕರ್ :** ಸರಾಸರಿ ಒಟ್ಟು ಎಷ್ಟು ಕಿಮ್ಮತ್ತಿನ ಆಸ್ತಿ ಆ ಲಕೋಟೆಯಲ್ಲಿ ಇತ್ತು ?

**ಸುಂದರರಾಯ :** (ಚಕಿತನಾಗಿ) ಸರಾಸರಿ ಎಂದರೆ!.... ಸರಿಯಾಗಿ ಒಂದು ನೂರು ರೂಪಾಯಿ ಆಸ್ತಿ.

**ಸಾಖಳ್‌ಕರ್ :** ಓ, ಹೌದೌದು....ನಿಶ್ಚಯವಾಗಿ.

(ಬರೆದುಕೊಳ್ಳುತ್ತಿರುವನು.)

**ಕಮಲಮ್ಮ :** ಆದರೆ ಆ ಹಣ ಕಳವಾಗಿದೆಯೆಂದು ನಾನಿನ್ನೂ ನಂಬುತ್ತಿಲ್ಲ. ಆ ಲಕೋಟೆಯಿಂದ ಹಣವನ್ನು ಹೊರ ತೆಗೆದು ನೀವು ನಿಮ್ಮ ಜೇಬಿನಲ್ಲಾಗಲಿ ಅಥವಾ ಇನ್ನೆಲ್ಲಿಯಾಗಲಿ ಇಟ್ಟಿಲ್ಲ, ಇಟ್ಟಿಲ್ಲವಲ್ಲ ?

**ಸುಂದರರಾಯ :** (ಜೇಬುಗಳನ್ನು ಬರಿದುಮಾಡಿ ತೋರಿಸಿ) ನೋಡು.... .......ಇಲ್ಲೆಲ್ಲಿದೆ ನೂರು ರೂಪಾಯಿ ನೋಟು ? ನಾನು ಇನ್ನೆಲ್ಲಿ ಇಡಬಹುದು ?

**ಕಮಲಮ್ಮ :** ನಿನ್ನೆ ನೀವು ಧರಿಸಿದ ಬಟ್ಟೆಗಳು ಯಾವುವು ?

**ಸುಂದರರಾಯ :** ಎಲ್ಲವೂ ಇವೇ. ಅಷ್ಟೂ ಅಲ್ಲದೆ ಅದನ್ನು ತಿರುಗಿ ಪಾಕೀಟಿನಲ್ಲಿ ಇಟ್ಟ ನೆನಪು ಖಂಡಿತವಾಗಿಯೂ ಇದೆ. ನಾನು ಈಗಾಗಲೇ ನಿನಗೆ ಹೇಳಲಿಲ್ಲವೆ ?....ಹಣ ಕಳುವಾಗಿದೆ....ಕಳ್ಳನನ್ನು ಕಂಡು ಹಿಡಿಯಬೇಕಾಗಿದೆ ಈಗ.

**ಕಮಲಮ್ಮ :** ಆದರೆ ಈ ಮನೆಯಲ್ಲಿದ್ದ ಯಾರೂ ಆ ರೀತಿ ಯಿಂದ ಹಣವನ್ನು ಹಾರಿಸುವಂತಿಲ್ಲ....ಒಂದು ವೇಳೆ ತೆಗೆದಿದ್ದರೂ ನೀವು ಈ ರೀತಿ ಹುಡುಕುವುದರಿಂದ....

**ಮೋಹನ :** ( ಪ್ರವೇಶಿಸಿ ) ಅಮ್ಮಾ, ನಾನು ಮಾರ್ಕೆಟಿಗೆ ಹೋಗಿ ಹತ್ತು ನಿಮಿಷದಲ್ಲಿ ಬಂದುಬಿಡುತ್ತೇನೆ.... ನಿನಗೇನಾದರೂ ಸಾಮಾನು ತರುವುದಿದೆಯೇ ? ( C. I. D. ಯನ್ನು ಗುರುತಿಸಿ ) ಓ, C. I. D. ನಾಖಿಳ್‌ಕರರು........ಏನು ವಿಶೇಷ ? ಸ್ನೇಹಿತರೇ ಇದ್ದರೂ ಕೂಡ C. I. D. ಗಳೆಂದರೆ ಭಯವಾಗು ತ್ತದೆ. ನಮ್ಮ ಮನೆಯಲ್ಲಿ ಏನಾದರೂ ತನಿಖೆಗಾಗಿ ಬಂದಿಲ್ಲವಲ್ಲ ! ಸಹಜ ತಾನೆ ತಾವು ಬಂದದ್ದು ? ಅಥವಾ ನಮ್ಮ ಮೇಲೆ ಏನಾದರೂ ಅಪವಾದ ಗಿಪವಾದಗಳು..... .

**ಕಮಲಮ್ಮ ·** ಏನಿಲ್ಲ ಮೋಹನ, ನಮ್ಮದು ನೂರು ರೂಪಾಯಿ ನೋಟೊಂದು ಕಳೆದುಹೋಗಿದೆ.

**ಸುಂದರರಾಯ :** ಕಳೆದು ಹೋಗಿಲ್ಲ....ನೂರು ರೂಪಾಯಿ ಕಳವಾಗಿದೆ.

**ಮೋಹನ :** ಕಳವಾಗಿದೆ ? ಹೇಗೆ—ಯಾರು ?

**ಸುಂದರರಾಯ :** ಹೂಂ . ನಿಮ್ಮ ಅಮ್ಮ ಕಳೆದುಹೋಗಿದೆ ಎಂದೇ ಹೇಳುತ್ತಿದ್ದಾಳೆ. ನನಗಂತೂ ಖಂಡಿತ ಗೊತ್ತು ಅದನ್ನು ಕಳುವು ಮಾಡಿದ್ದಾರೆಂತ. ಯಾರು ಕದ್ದವರು ಎನ್ನುವುದು ಮಾತ್ರ ಇನ್ನೂ ನಿಶ್ಚಿತವಾ ಗಿಲ್ಲ. ಹುಡುಕಿ ತೆಗೆಯಬೇಕಾಗಿದೆ.

**ಕಮಲಮ್ಮ :** ನಾನು ಹೇಳೋದೆಂದ್ರೆ ಅದನ್ನು ಒಂದೊಮ್ಮೆ

ಯಾರಾದರೂ ಹಾರಿಸಿದ್ದಲ್ಲಿ ಅವರು ನಮಗೆ ಕಾಣ-ಲಿಕ್ಕೇ ಸಿಗದಂತೆ ಅದನ್ನು ಮರೆಮಾಡಿ ಬಿಟ್ಟಿರುತ್ತಾರೆ. ನೂರು ರೂಪಾಯಿ ನೋಟನ್ನು ಜನರಿಗೆ ಕಾಣಿಸುವಂತೆ ಕೈಯಲ್ಲಿಯಾಗಲಿ ಜೇಬಿನಲ್ಲಿಯಾಗಲಿ ಇಟ್ಟುಕೊಂಡು ಅಲೆದಾಡುವಷ್ಟು ಮೂರ್ಖರು ಅವರಿರಲಿಕ್ಕಿಲ್ಲ. ಹೌದಲ್ಲವೇನ್ರಿ ಸಾಖಳ್‌ಕರ್ ?

**ಸಾಖಳ್‌ಕರ್ :** ಖಂಡಿತವಾಗಿಯೂ ಹೌದು.... ಅವನು ಸುರಕ್ಷಿತ ಸ್ಥಳದಲ್ಲಿ ಅದನ್ನು ಇಟ್ಟಿರುತ್ತಾನೆ. ಇಲ್ಲವೇ ಎಲ್ಲಾದರೂ ಹೋಗಿ ಆದಷ್ಟು ಬೇಗನೆ ಚಿಲ್ಲರೆ ಮಾಡಿಸಿ ಬೇರೆ ಕಡೆ ಸಾಗಿಸಿರುತ್ತಾನೆ ಎನ್ನುವುದು ನಿಜವಾದ ಮಾತು. ಆದರೆ ನಾವು ಅದನ್ನು ಹುಡುಕಿ ತೆಗೆಯುತ್ತೇವೆ.

**ಮೋಹನ :** ಯಾವಾಗ ಕಳೆದುಹೋಯ್ತು ಮ್ಮಾ ಅದು ?

**ಕಮಲಮ್ಮ :** ನಾನಲ್ಲ ಕಳೆದದ್ದು.... ನಿಮ್ಮ ತಂದೆಯವರು ಆ ಟೇಬಲ್ಲಿನ ಮೇಲೆ ಕೆಲವು ಪತ್ರಗಳ ನಂಗಡ ಅದನ್ನೂ ಇಟ್ಟಿದ್ದರಂತೆ.

**ಸುಂದರರಾಯ :** ನಿನ್ನೆ ಮುಂಜಾನೆ ಇಟ್ಟಿದ್ದೆ; ಆದರೆ ಇಂದು ಅದು ಅಲ್ಲಿಲ್ಲ.

**( ಮೋಹನನು ಟೇಬಲ್ಲಿನ ಹತ್ತಿರ ಹೋಗಿ ಹುಡುಕಾಡುತ್ತ ಪತ್ರಗಳನ್ನು ಕೈಗೆತ್ತಿಕೊಂಡು )**

**ಮೋಹನ :** ದತ್ತಮಾವನಿಂದ ಬಂದ ತಂತಿ ಇಲ್ಲಿದೆ. ಅವನು ಇಂದು ಇಷ್ಟರಲ್ಲೇ ಬರಬಹುದು. **( ತಂತಿಯನ್ನು ಓದಿ ತನ್ನ ಗಡಿಯಾರವನ್ನು ನೋಡಿಕೊಂಡು )** ಓ, ಹನ್ನೊಂದು ಗಂಟೆಯಾಯಿತು. ಇನ್ನು ಹತ್ತು

ನಿಮಿಷಗಳಲ್ಲಿ ಅವನು ಇಲ್ಲಿ ಬಂದು ತಲ್ಪಬಹುದು. ಅಪ್ಪಾ, ಅವರೆಲ್ಲ ಇಲ್ಲಿ ಬಂದಾಗ ನೀವು ಈ ರೂಪಾಯಿನ ವಿಷಯ ಇಂದಿನ ಮಟ್ಟಿಗೆ ಮರೆತುಬಿಟ್ಟು ಶಾಂತರಾಗಿರಬೇಕು. ಕೈ ಜಾರಿದ ಮುತ್ತಿಗಾಗಿ ಹಂಬಲಿಸಿದರೆ ಏನು ಪ್ರಯೋಜನ? ಕೈ ತಪ್ಪಿ ಎಲ್ಲಿಯಾದರೂ ಬಿದ್ದಿದ್ದರೆ ಎಂದಾದರೂ ಸಿಗಬಹುದು. ಕಳೆದುಹೋದ ವಸ್ತುಗಳು ಯಾವಾಗಲೂ ಹಾಗೆಯೆ ........ಹುಡುಕಿದಾಗ ಸಿಗುವುದಿಲ್ಲ; ಮತ್ತು ಸುಮ್ಮನಿದ್ದಾಗ ಎಂದಾದರೂ ಒಮ್ಮೆಲೆ ಕಣ್ಣಿಗೆ ಬೀಳುತ್ತವೆ.

**ಸುಂದರರಾಯ** : ಆದರೆ ಇದು ಹಾಗಲ್ಲ....ಸುಮ್ಮನೆ ಕುಳಿತರೆ ಸಿಗುವಂತಿಲ್ಲ. ಏಕೆಂದರೆ ಕಳೆದುಹೋದ ಒಡವೆ ಇದಲ್ಲ....ಆದರೆ ಕಳವಾದದ್ದು.

**ಕಮಲಮ್ಮ** : (ಈ ಮಾತಿಗೆ ಬೇಸರದಿಂದ ಮಾತನ್ನು ತಿರುಗಿಸುವ ಉದ್ದೇಶದಿಂದ) ಮೋಹನ, ದತ್ತ ಮಾಮನಿಗಾಗಿ ನಾನು ನಿನ್ನ ಕೋಣೆಯಲ್ಲೇ ಹಾಸಿಗೆಯನ್ನು ಹಾಕುವೆನು....ಏಕೆಂದರೆ ಇಲ್ಲಿಗೆ ಬಂದಾಗಲೆಲ್ಲಾ ಅವನು ಹೇಳುತ್ತಿರುತ್ತಾನೆ....ನಿನ್ನ ತಂದೆಯವರ ಕೋಣೆಯಲ್ಲಿ ಮಲಗಿದರೆ ಇವರ ಗೊರಕೆಯ ಹೊಡೆತಕ್ಕೆ ಅವನಿಗೆ ನಿದ್ದೆಯೇ ಬರುವುದಿಲ್ಲವಂತೆ.

(ಎನ್ನುತ್ತಾ ಹೋಗುವಳು.)

**ಸಾಖಳ್‌ಕರ್** : ಕ್ಷಮಿಸಿ....ನಾನು ನಿಮ್ಮ ಮನೆಯ ಒಳಹೊರಗೆಲ್ಲ ಒಮ್ಮೆ ಚನ್ನಾಗಿ ಸುತ್ತಾಡಿ ನೋಡಿ ಹೋಗುತ್ತೇನೆ. ಪತ್ತೆ ಹಚ್ಚುವಾಗ ಕಿವಿಯಿಂದ ಕೇಳಿದ್ದಕ್ಕಿಂತಲೂ ಕಣ್ಣಿಂದ ಕಂಡ ವಿಷಯ ಹೆಚ್ಚು ಸಹಾಯ

ವಾಗುತ್ತದೆ. ಮನೆಯನ್ನೆಲ್ಲ ನೋಡಿದ ನಂತರ ಹೊರಗಿನ ತೋಟದಲ್ಲಿ ಕುಳಿತಿರುತ್ತೇನೆ. ನಾನು ಏಕೆ ಇಲ್ಲಿಗೆ ಬಂದಿರುವೆನೆಂದು ಯಾರಾದರೂ ಸಂಶಯದಿಂದ ಕೇಳಿದರೆ, ಮುಂದಿನ ವಾರ ನಡೆಯು ಲಿರುವ ನಮ್ಮ ಪೋಲಿಸ್ ಪಂದ್ಯಾಟಕ್ಕೆ ವಂತಿಗೆ ವಸೂಲು ಮಾಡಲು ಎಂದು ಹೇಳಿರಿ. ಮತ್ತು ನಿಮಗೆ ನಾನು ಬೇಕಿದ್ದರೆ ಹೇಳಿ ಕಳಿಸಿರಿ, ಬರುತ್ತೇನೆ. ( ನಿಷ್ಕ್ರಮಣ )

**ಮೋಹನ :** ( ತಂದೆಯ ಹತ್ತಿರ ಬಂದು ) ಅಪ್ಪಾ, ದತ್ತಮಾಮ ಬಂದ ಕೂಡಲೆ ರೂಪಾಯಿ ಕಳುವು ಆಗಿದೆ ಎಂದು ಹೇಳಿಬಿಟ್ಟೀರಿ ಮತ್ತೆ ! ಬೇಸರ ಪಟ್ಟುಕೊಳ್ಳತಕ್ಕ ವ್ಯಕ್ತಿ ಅವರಲ್ಲದಿದ್ದರೂ ಬಂದ ತಕ್ಷಣವೇ ಇಂಥ ಸುದ್ದಿ ಬಂದವರ ಎದುರಿಗೆ ಹೇಳುವುದು ಸರಿಯಲ್ಲ.... ತಾವು ಬಂದ ಬಗ್ಗೆ ನಮಗೆ ತಮ್ಮಲ್ಲಿ ಅನಾಸಕ್ತಿ ಎಂದು ಅವರು ತಿಳಿದರೂ ತಿಳಿಯಬಹುದು.... ಇಲ್ಲವೆ, ಒಂದು ಪುಟ್ಟ ವಿಷಯವನ್ನು ಪರ್ವತದಷ್ಟು ದೊಡ್ಡದಾಗಿ ಮಾಡುತ್ತಿದ್ದಾರೆ ಎಂದು ಭಾವಿಸಿದರೂ ಭಾವಿಸಬಹುದು.

**ಸುಂದರರಾಯ :** ಏನು ? ಇದೊಂದು ಪುಟ್ಟ ವಿಷಯವೇ ? ನೂರು ರೂಪಾಯಿಗಳು, ಎಂದರೆ ಹತ್ತು ಸಾವಿರ ನಯಾಪೈಸೆ ಕಳವು ಆದದ್ದು ಸಾಮಾನ್ಯ ಸಂಗತಿಯೆ?

**ಮೋಹನ :** ಆದರೆ....ಈಗ ನಾವು ವಿಚಾರವಂತರಾಗಿ ಸ್ವಲ್ಪ ಪರಿಶೀಲನೆ ಮಾಡೋಣ. ಒಂದೊಮ್ಮೆ ಕಳವು ಆಗಿದೆ ಯೆಂದೇ ತಿಳಿಯೋಣ, ಯಾರು ತೆಗೆದಿರಬಹುದು ?

ನಮ್ಮ ಮನೆಯ ಮಂದಿಯಲ್ಲಿ ಯಾರೂ ಅಂಥ ಕಾರ್ಯ ಮಾಡಿರಲಾರರು. ಇರಲಿ. ಅಪ್ಪಾ, ನಿಮಗೆ ಯಾರ ಮೇಲೆ ಸಂಶಯವಿದೆ ಅದನ್ನಾದರೂ ಹೇಳಿರಿ.

**ಸುಂದರರಾಯ :** ನನಗೆ ಎಲ್ಲರ ಮೇಲೆಯೂ ಸಂಶಯವೇ. ಮತ್ತೆ ಇಲ್ಲಿದ್ದವರಲ್ಲಿ ಯಾರಾದರೂ ಒಬ್ಬರು ತೆಗೆದಿರಲೇ ಬೇಕು.

**ಮೋಹನ :** ಅದು ಸರಿಯಾಗಲಾರದು........ಒಬ್ಬೊಬ್ಬರನ್ನೆ ವಿಚಾರದಲ್ಲಿ ತೆಗೆದುಕೊಂಡರೆ, ಮೊದಲನೆಯದಾಗಿ ನಮ್ಮ ನಾಗತ್ತೆಯನ್ನು ಬಿಟ್ಟುಕೊಟ್ಟೇ ಪ್ರಾರಂಭಿಸ ಬೇಕು.

**ಸುಂದರರಾಯ :** ಹಾಗೇಕೆ ಹೇಳುತ್ತಿ ? ಅವಳನ್ನು ಏಕೆ ಬಿಡಬೇಕು ?

**ಮೋಹನ :** ಇದೀಗ ಸರಿ ಹೋಯ್ತು. ಹಾಗಿದ್ದರೆ ನೀವು ನನ್ನ ಮತ್ತು ಅಮ್ಮ ಇಬ್ಬರ ಮೇಲೂ ಅಪವಾದ ಹೊರಿಸ ಬಹುದು. ಇನ್ನು ಮನೆ ಕೆಲಸದ ಭಾಗೀರತಿ ಇದ್ದಾಳೆ. ಅವಳ ಬಗ್ಗೆ ನನಗೆ ಎಳ್ಳಷ್ಟೂ ಸಂಶಯ ಬರುವುದಿಲ್ಲ. ಎಷ್ಟೋ ಸಲ ನನ್ನ ಕಪಾಟಿನ ಕೀಲುಕೈಯನ್ನು ಅವಳ ಕೈಗೆ ಕೊಟ್ಟದ್ದುಂಟು. ತೋಟದ ಆಳು ಸೋಮು ಮತ್ತು ರಾಮುವಿನ ಸ್ವಭಾವ ನಿಮಗೆ ಗೊತ್ತಿದ್ದದ್ದೇ. ಡ್ರೈವರ್ ಜಾಫರನಂತೂ ಅಪ-ರಂಜಿಯಂತಹ ಮನುಷ್ಯ. ಕಾರಿನಲ್ಲಿ ಬಿದ್ದುಹೋದ ಚಿಲ್ಲರೆ ಹಣ ಮತ್ತು ಇತರ ಒಡವೆಗಳನ್ನೂ ತಿರುಗಿ ತಲುಪಿಸಿದ್ದಾನೆ ಆತ.

**ಸುಂದರರಾಯ :** ಚಿಲ್ಲರೆ ಹಣ ಚಿಲ್ಲರೆ ಒಡವೆಗಳನ್ನು ತಿರುಗಿ

ಸಲ್ಲಿಸಿದ್ದಾನೆ ನಿಜ. ಆದರೆ ಇದು ಅಖಂಡ ನೂರು ರೂಪಾಯಿ....ಈ ಕಾಲದಲ್ಲಿ ಯಾರನ್ನೂ ನಂಬು ವಂತಿಲ್ಲ. ಅದರಲ್ಲೂ ಅಡಿಗೆ ನಾರಾಯಣನಲ್ಲಿ ನನಗೆ ವಿಶ್ವಾಸವೇ ಇಲ್ಲ. ಅವನ ಮುಖ ನೋಡಿದರೇ ನನಗೇಕೋ ಅಸಹ್ಯ. ಅಡಿಗೆ ಮನೆಯಲ್ಲಿದ್ದ ಸಕ್ಕರೆ, ಕೊಬ್ಬರಿ, ಉಪ್ಪಿನಕಾಯಿ, ಹುಣಸೆಹಣ್ಣು ಮುಂತಾದವೆಲ್ಲ ಅವನ ಕೂಳುಬಾಕ ಹೊಟ್ಟೆಗೆ ಸೇರುತ್ತವೆ. ಅವನೇನು ಪ್ರಾಮಾಣಿಕನೇ ?

**ಮೋಹನ :** ( ನಗುತ್ತಾ ) ನಾರಾಯಣ ?! ಅವನೊಬ್ಬನನ್ನು ನಾನು ಮರೆತೇಬಿಟ್ಟಿದ್ದೆ. ನಿಜ, ಆದರೆ ಅವನಂತಹ ಶುದ್ಧ ಶುಂಠಿ ಇನ್ನೊಬ್ಬನಿಲ್ಲ. ನೂರು ರೂಪಾಯಿ ನೋಟು ಕೈಗೆ ಸಿಕ್ಕರೂ ಗುರುತಿಸಲಾರದಷ್ಟು ಮೊದ್ದು ಪ್ರಾಣಿ ಆತ. ಒಂದು ವೇಳೆ ಗುರುತಿಸಿದರೂ ಕಳವು ಮಾಡುವ ಧೈರ್ಯ ಅವನಿಂದಾಗದು. ಅಪ್ಪಾ, ಈ ರೀತಿ ನೀನು ಸಂಶಯ ತಾಳುವುದನ್ನು ನೋಡಿದರೆ ನೀನು ಕುಳಿತ ಖುರ್ಚಿ ಮತ್ತು ಈ ಮೇಜುಗಳ ಬಗೆಗೂ ನಿನಗೆ ನಂಬುಗೆ ಇದೆಯೋ ಇಲ್ಲವೋ! ಮತ್ತೆ ಯಾರ ಮೇಲೆಯಾದರೂ ಸಂಶಯ ತಾಳಬಹುದೇ ವಿನಃ ಇವರಲ್ಲ. ಇನ್ಯಾರಾದರೂ ಬಂದಿದ್ದರೇನಪ್ಪಾ ?

**ಸುಂದರರಾಯ :** ಇನ್ಯಾರು ಬಂದಿದ್ದಾರೆ ? ಇವರಲ್ಲದೆ ಒಂದು ನರಪ್ರಾಣಿಯೂ ನಿನ್ನೆಯಿಂದ ಈ ಮನೆಯಲ್ಲಿ ಸುಳಿದಿಲ್ಲ. ನೀನು ಏನೇ ಹೇಳು—ಇವರಲ್ಲಿ ಯಾರಾ

[illegible]

ಎದ್ದು ಹೊಲ ಮೇಯುವ ಕಾಲ ಈಗ. ಉಂಡ ಮನೆಯ ಗಳ ಎಣಿಸುವ ದ್ರೋಹಿಗಳು. ಏನೇ ಇದ್ದರೂ ಈಗಿನಿಂದ ಒಂದೇ ಸಮನೆ ಹುಡುಕಿ ಕಳ್ಳರನ್ನು ಪತ್ತೆಹಚ್ಚಿ ಅವರು ಯಾರೇ ಆಗಿದ್ದರೂ ಜೈಲಿಗೆ ಕಳಿಸದೆ ಇದ್ದರೆ ನನಗೆ ಇಂದು ರಾತ್ರಿ ನಿದ್ರೆಯೇ ಬರಲಿಕ್ಕಿಲ್ಲ.

( ದತ್ತಮಾಮನ ಪ್ರವೇಶ........ಅಜಾನುಬಾಹು ಶರೀರ. ತಾರ್ಕಿಕನಂತಹ ಗಂಭೀರ ಮುಖಮುದ್ರೆ. ಆದರೂ ವಿನೋದ ಪ್ರಕೃತಿ ! )

**ಮೋಹನ :** ಬಾ ದತ್ತ ಮಾಮಾ ! ಬಸ್ಸು ಜಾಗ್ರತೆ ಬಂದು ಬಿಟ್ಟಿತೆಂದು ತೋರುತ್ತದೆ. ನಾವು ಎಣಿಸಿದ-ಕ್ಕಿಂತಲೂ ಮೊದಲೇ ಬಂದುಬಿಟ್ಟಿರಿ.

**ದತ್ತ ಮಾಮ :** ಹೌದು........ಬೇಗನೆ ಬಂದದ್ದೇನೋ ನಿಜ. ಹನ್ನೊಂದು ಗಂಟೆಯ ಬಸ್ಸಿಗೆ ಬಂದು ಇಳಿದವನು ಕಾರಿನಲ್ಲಿ ನೇರವಾಗಿ ಇಲ್ಲಿಗೇ ಬಂದೆ. ( **ಗಡಿಯಾರವನ್ನು ನೋಡಿ** ) ಆದರೂ ಈಗ ಹನ್ನೊಂದೂ ಕಾಲು ಆಗಿದೆ. ತಡಮಾಡಿ ಬರಬೇಕಾಗಿತ್ತೇನೊ ?

**ಮೋಹನ :** ಹಾಗಲ್ಲ ಮಾವಾ, ಹನ್ನೊಂದು ಗಂಟೆಯ ಬಸ್ಸು ಹನ್ನೊಂದಕ್ಕೇ ಬಂದುಬಿಟ್ಟಿತಲ್ಲಾ ಅಂತ ! S. T. ಬಸ್ಸು ಎಂದರೆ Slowly Travelling Bus ಎಂದು ತಿಳಿದಿದ್ದೆ.

**ದತ್ತ ಮಾಮ :** ಏಕೆ ? ನಿಮ್ಮೂರಿಗೆ ಬರುವ ಬಸ್ಸಿಗೆ Standard time ಇಲ್ಲೇನು ?

**ಮೋಹನ :** Standard timeಎ ವೇಳಾಪತ್ರಿಕೆಯಲ್ಲಿದೆ.

ಆದರೆ ಬಸ್ಸು ಬರುವುದು ಅದರ Service timeಗೆ ಅನುಸಾರವಾಗಿಯೇ ಹೊರತು ಸರಿಯಾದ ಟೈಮಿಗೆ ಅಲ್ಲ. ಅದಿರಲಿ. ಸುಮ್ಮನೆ ಏನೇನೋ ಹರಟುತ್ತ ನಿಂತುಬಿಟ್ಟೆ. ಒಳಗೆ ಅಮ್ಮ ನಿಮಗಾಗಿ ಕೋಣೆಯನ್ನು ಸಜ್ಜುಗೊಳಿಸುತ್ತಿದ್ದಾಳೆ. ಅವಳಿಗೆ ಹೇಳಿಬಿಟ್ಟು ಹಾಗೇ ಕಾಫಿಯನ್ನು ಮಾಡಿಸಿಕೊಂಡು ಬಂದುಬಿಡುತ್ತೇನೆ. ಅಲ್ಲಿಯ ವರೆಗೆ ಅಪ್ಪ ನಿಮ್ಮ ಹತ್ತಿರ ಮಾತನಾಡುತ್ತ ಕುಳಿತುಕೊಳ್ಳಬಹುದು. ಬರ್ತೇನೆ ಮಾವಾ. ( ಹೋಗುವನು. )

**ದತ್ತ ಮಾವ :** ಅಂತೂ ಮೋಹನ ಚುರುಕಾಗಿದ್ದಾನೆ. ಹಾಂ! ಸುಂದರೂ, ಹೇಗಿದ್ದಿಯಾ ನೀನು ? ನಾನು ಒಳಗೆ ಬರ್ತಾ ಇರೋ ಹಾಗೆ ನೀನು ಇಂದು ರಾತ್ರೆ ನಿದ್ರೆ ಹತ್ತಲಿಕ್ಕಿಲ್ಲ ಎಂದು ಎನ್ನುತ್ತಿದ್ದಿಯಲ್ಲ ! ಏಕೆ, ಆರೋಗ್ಯ ಸರಿಯಾಗಿಲ್ಲವೆ ?

**ಸುಂದರರಾಯ :** ಇಲ್ಲ.

**ದತ್ತ ಮಾವ :** ಏಕೆ ? ಏನಾಗಿದೆ ?

**ಸುಂದರರಾಯ :** ನಿನ್ನೆ ಇದ್ದದ್ದು ಇಂದಿಲ್ಲ.

**ದತ್ತ ಮಾವ :** ಅದು ಸಹಜ. ಇಳಿಯುತ್ತಿರುವ ಈ ವಯಸ್ಸಿನಲ್ಲಿ ಹಾಗೆ ಎನ್ನಿಸುವುದು ಸಹಜ. ಈ ಹದಿನೈದು ದಿವಸಗಳಲ್ಲಿ ನಾನು ಹದಿನೈದು ಪೌಂಡು ತೂಕ ಕಳೆದುಕೊಂಡಿದ್ದೇನೆ.

**ಸುಂದರರಾಯ :** ನಾನು ಕಳೆದುಕೊಂಡದ್ದು ನೂರು....

**ದತ್ತ ಮಾವ :** ಮೂರೆಂದರೆ ಏನೂ ಹೆಚ್ಚಾದಂತಾಗಲಿಲ್ಲ. ಡಾಕ್ಟರರನ್ನು ಕಂಡಿದ್ದರೆ ಎಲ್ಲವೂ ಸರಿಹೋಗುತ್ತಿತ್ತು.

ದೃಶ್ಯ—೧

**ಸುಂದರರಾಯ :** ಡಾಕ್ಟರನ್ನು ಏಕೆ ಕಾಣೋದು ? ರಲ್ಲಾ, ನೂರು ರೂಪಾಯಿಯನ್ನು ಕಳೆದುಕೊಂಡದ್ದಾಗಿದೆ.

**ದತ್ತ ಮಾವ :** ಪ್ರಕೃತಿ ಚನ್ನಾಗಿಲ್ಲ ಎಂದಾದ ಮೇಲೆ ಮೂರೇನು, ನೂರೇನು ? ಎಷ್ಟಾದರೂ ಖರ್ಚು ಮಾಡಲೇ ಬೇಕು.

**ಸುಂದರರಾಯ :** ನಾನು ಹೇಳೋದೇ ನಿನಗೆ ಅರ್ಥವಾಗ್ತಾ ಇಲ್ಲ. ನಿನ್ನೆ ಮುಂಜಾನೆ ನಾನು ಇಲ್ಲಿಟ್ಟ ನೂರು ರೂಪಾಯಿಯ ನೋಟೊಂದನ್ನು ಯಾರೋ ಕಳವು ಮಾಡಿದ್ದಾರೆ.

**ದತ್ತ ಮಾವ :** ಮೊದಲೆ ಇಷ್ಟನ್ನು ನನಗೆ ಸ್ಪಷ್ಟವಾಗಿ ಹೇಳಬಾರದಾಗಿತ್ತೆ ? ನಾನು ಬೇರೆಯಾಗಿಯೆ ತಿಳಿದೆ.... ಓಹೋ ! ಅದಕ್ಕಾಗಿಯೇ ಇರಬಹುದು, ನಾನು ಬರುವಾಗ ಅವನು ಹಾಗೆ ಮಾಡುತ್ತಾ ಇದ್ದ.

**ಸುಂದರರಾಯ :** ಯಾರು ? ಏನು ಮಾಡುತ್ತಿದ್ದ ?

**ದತ್ತ ಮಾವ :** ಯಾರೋ ಒಬ್ಬ....ತೋಟದಲ್ಲಿ ನೀರು ಹರಿಯುವ ಕಾಲುವೆಯ ಹತ್ತಿರ ಅಳತೆಗೋಲಿನಿಂದ ಏನನ್ನೋ ಅಳೆಯುತ್ತಲಿದ್ದ. ಬಹುಶಃ ಅಲ್ಲಿ ಮೂಡಿದ ಕಾಲಿನ ಗುರುತನ್ನು ಗುರುತಿಸುತ್ತ ಇದ್ದಿರಬೇಕು. ಇಷ್ಟು ಹೊತ್ತಿಗೆ ಗೇಟಿನ ಮೇಲೆ ಮೂಡಿರಬಹುದಾದ ಹಸ್ತಮುದ್ರೆಗಳನ್ನು ಚಿತ್ರಿಸಿಕೊಳ್ಳುತ್ತಿದ್ದಾನೋ ಏನೊ !

**ಸುಂದರರಾಯ :** ಹಾ ! ಅವರು C. I. D. ಸಾಖಳ್‌ಕರರು. ಅವರಿಗೆ ತಿಳಿಸಿ ಕಾರ್ಯ ಪ್ರಾರಂಭಿಸುವುದು ಒಳಿತೆಂದು

ಯೋಚಿಸಿ ಕೂಡಲೆ ನಾನು ಅವರನ್ನು ಇಲ್ಲಿಗೆ ಬರಮಾಡಿಕೊಂಡೆ. ನಿಮ್ಮ ಕಮಲಾ ಹೇಳೋದೇನೆಂದರೆ, ಅದು ಕಳುವಾಗಿಯೇ ಇಲ್ಲವೆಂದು. ಆದರೆ ಇಲ್ಲೇ ಇಟ್ಟ ನೂರು ರೂಪಾಯಿ ನೋಟು ತಾನೇ ತಾನಾಗಿ ನಡೆದು ಹೊರಗೆ ಹೋಗಿರಲಾರದು. ಅದನ್ನು ಯಾರಾದರೂ ತೆಗೆದಿರಲೇಬೇಕು. ಆದರೆ ಹೊರಗಿನವರು ಯಾರೂ ಒಳಗೆ ಬಂದಿಲ್ಲ. ಇದ್ದವರಲ್ಲಿ ಕದ್ದವರು ಯಾರು ಎನ್ನುವುದೆ ಸಮಸ್ಯೆಯಾಗಿದೆ.

**ದತ್ತ ಮಾವ** : ಸಹಜ....ಕದ್ದವನು ತಾನೇ ತನ್ನ ವಿಳಾಸವನ್ನು ಕೊಟ್ಟು ಹೋಗುವ ರೂಢಿ ಎಲ್ಲೂ ಇಲ್ಲ.

( **ಮೋಹನ ಮತ್ತು ಕಮಲಮ್ಮ ಪ್ರವೇಶಿಸುವರು.** )

**ಕಮಲಮ್ಮ** : ಒಳಗೆ ನಾನು ಮೋಹನನ ಕೋಣೆಯನ್ನು ನಿನ್ನೆ ನಲುವಾಗಿ ಸ್ವಚ್ಛಮಾಡುತ್ತಲಿದ್ದೆ. ಎಲ್ಲ ಕಡೆಗೂ ಪುಸ್ತಕ ಮತ್ತು ವಸ್ತ್ರಗಳನ್ನು ಹರಡಿ ಹಾಕಿಬಿಟ್ಟಿದ್ದಾನೆ—ಅದರಿಂದ ಇಷ್ಟು ತಡವಾಯ್ತು. ಏನು, ಊರಲ್ಲಿ ಎಲ್ಲಾ ಕ್ಷೇಮ ತಾನೆ ? ಏನಾದರೂ ವಿಶೇಷ ಸಮಾಚಾರ ಇದೆಯೆ ?

**ದತ್ತ ಮಾವ** : ಎಲ್ಲಾ ಚೆನ್ನಾಗಿದ್ದಾರೆ........ಇಲ್ಲಿಗೆ ಬಂದ ನಂತರವೇ ವಿಶೇಷ ಸಮಾಚಾರ ಕಿವಿಗೆ ಬಿತ್ತು—ನೂರು ರೂಪಾಯಿ ನೋಟು ಕಳುವಾಗಿದೆಯಂತ !

**ಮೋಹನ** : ಆಗಲೇ ಹೇಳಿಬಿಟ್ಟೆಯಾ ಅಪ್ಪಾ !

**ಕಮಲಮ್ಮ** : ಇವರಿಗೆ ಆ ವಿಷಯ ಬಿಟ್ಟರೆ ಇನ್ನೇನೂ ಇಲ್ಲವೆ ಇಲ್ಲ....ಹೌದು ಇಂದು ಮುಂಜಾನೆ ನಾವೆಲ್ಲ ಕೂಡಿ ಇಲೆಲ ಹುಡುಕಿದಾಯಿತು—ಉಪಯೋಗವಾಗ

ಲಿಲ್ಲ. ಯಾರೋ ಕಳವು ಮಾಡಿದ್ದಾರೆಂದು ಇವರು ಗೊಣಗುತ್ತಿದ್ದಾರೆ....ನಾನು ನಂಬುವುದಿಲ್ಲ.

( ಅಡಿಗೆ ನಾರಾಯಣನ ಪ್ರವೇಶ. )

**ನಾರಾಯಣ :** ( ಅವಸರದಿಂದ ) ಅಮ್ಮಾವ್ರೆ, ಕಾಫಿಯನ್ನು ಕಾಸಿ ಕೆಳಗಿಟ್ಟಿದ್ದೇನೆ. ಒಲೆಯ ಮೇಲೆ ಹಾಲು ಕುದಿಯುತ್ತಾ ಇದೆ. ಇಲ್ಲೀ ತಂದು ಕೊಡಬೇಕೋ ಅಥವಾ ನೀವೇ ಬಂದು ನೋಡುತ್ತೀರೋ ಅಂತ ಕೇಳೋಕೆ ಬಂದೆ. ಅಷ್ಟು ಅಲ್ಲದೆ ತೆಗೆದಿಟ್ಟ ಬ್ರೆಡ್ಡಿನ ತುಂಡನ್ನು ಆ ಕರಿ ಬೆಕ್ಕು ಕಚ್ಕೊಂಡು ಓಡಿಹೋಯ್ತು. ನಾನು ಬೆಳಗಿನಿಂದ ಎರಡು ಮೂರು ಸಾರೆ ಅದನ್ನು ಪೊರಕೆಯಿಂದ ಹೊಡೆಯಲು ಹೋದೆ. ಆದರೆ ಆ ಪ್ರಾಣಿ ಕೈಗೆ ಸಿಕ್ಕುವುದಿಲ್ಲ. ಅದರ ಕಾಟ ನನಗಂತೂ ಪ್ರಾಣಸಂಕಟವಾಗಿದೆ.

**ಕಮಲಮ್ಮ :** ಅದೆಲ್ಲ ಇರಲಿ ; ಹಾಲು ಕುದಿಯುತ್ತಾ ಇರುವಾಗ ಇಲ್ಲಿಗೇಕೆ ಬಂದೆ....ಮೊದಲು ಹೋಗಿ ಹಾಲು ಕೆಳಗಿಳಿಸು; ಹಾ—ಬೇಡ, ನಾನೇ ಬರುತ್ತೇನೆ. ನಿನ್ನ ಹತ್ತಿರ ಕೆಲಸ ಹೇಳುವುದಕ್ಕಿಂತಲೂ ನಾವೇ ಮಾಡುವುದು ಮೇಲು.

( ನಾರಾಯಣನ ಹಿಂದೆಯೇ ಹೋಗುವಳು. )

**ದತ್ತ ಮಾವ :** ಈ ನಾರಾಯಣನ ಮೇಲೆ ನೀನು ಸಂಶಯ ತಾಳ್ಳಿಲ್ಲವಲ್ಲ ! ಇನ್ಯಾರ್ಯಾರ ಮೇಲೆ ನಿನ್ನ ಸಂದೇಹ ದೃಷ್ಟಿ ಬಿದ್ದಿದೆ ?....ಒಟ್ಟಿನಲ್ಲಿ ನೋಟು ಮತ್ತು ಕಳ್ಳ ಸಿಗುವ ವರೆಗೂ ನಿನಗೆ ಸಮಾಧಾನ ಇಲ್ಲ ಅನ್ನು.

**ಸುಂದರರಾಯ :** ಸಮಾಧಾನ ಹೇಗೆ ಆಗಬೇಕು ಹೇಳು.... ಕಳ್ಳನನ್ನು ಕಂಡುಹಿಡಿಯದೆ ನನ್ನ ಮನಸ್ಸಿಗೆ ನೆಮ್ಮದಿಯೇ ಇಲ್ಲ. ಸಣ್ಣ ವಿಷಯವಲ್ಲ ಇದು....ಎಷ್ಟೇ ಖರ್ಚಾಗಲಿ, ತೊಂದರೆಯಾಗಲಿ, ಕಳ್ಳನನ್ನು ಶೋಧಿಸಲೇ ಬೇಕು.

**ದತ್ತ ಮಾವ ·** ಈಗಾಗಲೆ ಶೋಧ ನಡೆಸಿದೆಯೋ ಹೇಗೆ ?

**ಸುಂದರರಾಯ :** ಇನ್ನೂ ಇಲ್ಲ. ಇದೇ ಈಗ ಒಂದು ಗಂಟೆಗಿಂತ ಸ್ವಲ್ಪ ಮುಂಚೆ ತಾನೆ ಈ ಕಳುವಿನ ವಿಷಯ ತಿಳಿದದ್ದು.

**ದತ್ತ ಮಾವ :** ನನ್ನ ಹೊರತು ಇನ್ಯಾರಿಗಾದರೂ ಈ ಸುದ್ದಿಯನ್ನು ಹೇಳಿರುವೆಯಾ ?

**ಸುಂದರರಾಯ :** ಇಲ್ಲ....ಕಮಲೆಗೆ, ಮೋಹನನಿಗೆ ಮತ್ತು C. I. D. ಗೆ, ಈ ಮೂರು ಜನಕ್ಕೆ ತಿಳಿಸಿದ್ದೇನೆ.

**ದತ್ತ ಮಾವ :** ನಾನು, ನೀನು, ಕಮಲಾ, ಮೋಹನ, ಮತ್ತು ಆ C. I. D. ಈ ಐದು ಜನರಿಗಲ್ಲದೆ ಈ ಮನೆಯಲ್ಲಿದ್ದ ಇನ್ಯಾರಿಗೂ ಈ ಕಳವಿನ ಸಂಗತಿ ಗೊತ್ತಿಲ್ಲ ಅಲ್ಲವೇ ?

**ಸುಂದರರಾಯ :** ಇಲ್ಲ. ಇನ್ನು ಗೊತ್ತಿದ್ದರೆ ಮತ್ತೊಬ್ಬನಿಗೆ ಗೊತ್ತಿರಬಹುದು.

**ದತ್ತ ಮಾವ :** ಯಾರಿಗೆ ?

**ಸುಂದರರಾಯ :** ಆ ನೋಟನ್ನು ಕದ್ದವನಿಗೆ—ಅಷ್ಟೇ.

**ದತ್ತ ಮಾವ :** ( ನಗುತ್ತ ) ಅದು ಸರಿಹೋಯ್ತು....( ಸ್ವಲ್ಪ ತಡೆದು ಸಿಗರೇಟನ್ನು ಹೊತ್ತಿಸಿ ) ಸುಂದ್ರು, ನಿನಗೆ ಮಂತ್ರಗಾರಿಕೆಯಲ್ಲಿ ವಿಶ್ವಾಸವಿದೆಯೇ ?

**ಸುಂದರರಾಯ :** ಮಂತ್ರಗಾರಿಕೆ ? ಅಂದರೆ ?

**ದತ್ತ ಮಾವ :** ಅಂದರೆ .. ಮಾಯ —ಮೋಡಿ—ಇಂದ್ರಜಾಲ —ಜಾದು —ಕಣ್ಣು ಕಟ್ಟು ವಿದ್ಯೆ....ಯಾವುದೇ ಹೆಸರಿನಿಂದ ಕರೆಯಬಹುದು. ಜನಸಾಮಾನ್ಯರಲ್ಲಿ ಇವುಗಳ ಬಗ್ಗೆ ಭಯ ಇದ್ದೇ ಇರುವುದು. ಕೆಲವರು ಅದನ್ನು ಅಂಧಶ್ರದ್ಧೆಯೆಂದು ಹೀಯಾಳಿಸಬಹುದು. ಆದರೂ ಸಾಮಾನ್ಯವಾಗಿ ಮಂತ್ರಗಾರಿಕೆ, ಮೋಡಿ, ಮಾಟ ಇವುಗಳಿಂದ ಕೆಲವೊಮ್ಮೆ ವಿಶೇಷ ಪ್ರಯೋ-ಜನವಾಗುವುದುಂಟು.

**ಸುಂದರರಾಯ :** ಇದೆಲ್ಲ ವಿಷಯ ಈಗೇಕೆ ? ನಿನ್ನ ಉದ್ದೇಶವಾದರೂ ಏನು ?

**ದತ್ತ ಮಾವ :** ಏನಿಲ್ಲ. ಹೀಗೇ ಮನಸ್ಸಿನಲ್ಲಿ ಒಂದು ವಿಚಾರ ಹೊಳೆಯಿತು. ಗೊತ್ತಿಲ್ಲದ ವಿಷಯದ ಬಗ್ಗೆ ಇರುವ ಗೌರವಭಾವನೆ—ಮಂತ್ರ ತಂತ್ರ ಭೂತ ಪಿಶಾಚಿ ದೇವದಾನವರ ಬಗ್ಗೆ ಜನತೆಯಲ್ಲಿ ಇದ್ದ ವಿಶ್ವಾಸ—ಅಂಧಶ್ರದ್ಧೆ —ಭಯ—ಇವುಗಳ ಸದುಪಯೋಗ ಮಾಡಿಕೊಳ್ಳುವುದರಿಂದ ಸಮಾಜದ ಹಿತ ಸಾಧಿಸಬಹುದೆಂಬುದು ಸತ್ಯವಾದ ಸಂಗತಿ. ಕಳ್ಳತನ, ಅಧಮತೆ, ಅನೀತಿಗಳನ್ನು ಮಂತ್ರ, ತಂತ್ರ, ದೇವರ ಪ್ರಸಾದ ಮೊದಲಾದವುಗಳಿಂದ ಕೆಲವೊಮ್ಮೆ ಸುಲಭವಾಗಿ ಗುರುತಿಸಬಹುದು. ಇಂದಿನ ಈ ಕಳ್ಳತನವನ್ನು ಇಂಥ ಮಂತ್ರ ಇಲ್ಲವೆ ಪ್ರಮಾಣಗಳಿಂದ ಯಾಕೆ ಪತ್ತೆಹಚ್ಚಬಾರದು ?

**ಸುಂದರರಾಯ :** ಎಂದರೆ ಮಂತ್ರ ತಂತ್ರದ ಭಯ ತೋರಿಸಿ,

ಇಲ್ಲವೆ ದೇವರ ಮುಂದೆ ಪ್ರಸಾದ ತೆಗೆಯಿಸಿ, ಒಟ್ಟಿನಲ್ಲಿ ಇಂಥ ಉಪಾಯದಿಂದ ಬೆದರಿಸಿ ಕಳ್ಳನನ್ನು ಪತ್ತೆಹಚ್ಚಬೇಕೆಂದಲ್ಲವೆ ನಿಮ್ಮ ಮತ ? ಆದರೆ ಇದನ್ನೆಲ್ಲ ಮಾಡುವವರು ಯಾರು ? ತಿಳಿದವರು ಒಬ್ಬರು ಬೇಕಲ್ಲ ?

**ದತ್ತ ಮಾವ :** ಹಿಂದೊಮ್ಮೆ ನಮ್ಮೂರಿನಲ್ಲಿ ನಾನು ಈ ರೀತಿಯ ಒಂದು ಮಂತ್ರವನ್ನು ಮಾಡಿ ಒಂದು ಸುಳ್ಳನ್ನು ಹೊರಗೆಡವಿದೆ. ಇಂದು ಇಲ್ಲಿ ಅದೇ ರೀತಿ ಇನ್ನೊಂದು ಪ್ರಯೋಗ ಮಾಡುತ್ತೇನೆ ಬೇಕಾದರೆ. (ವಿಚಾರ ಮಾಡುತ್ತ ಅತ್ತಿಂದಿತ್ತ ಅಡ್ಡಾಡುವನು. ಅಷ್ಟರಲ್ಲಿ ಕಮಲಮ್ಮ ಕಾಫಿಯನ್ನು ತೆಗೆದುಕೊಂಡು ಪ್ರವೇಶಿಸುವಳು.)

**ಕಮಲಮ್ಮ :** ನನಗಂತೂ ಈ ಅಡಿಗೆಯವನ ಸಹವಾಸ ಸಾಕಾಗಿಹೋಗಿದೆ. ಮಿದುಳೇ ಇಲ್ಲದ ಮೂರ್ಖನವನು.

**ಸುಂದರರಾಯ :** ಹಾಂ. ಮೂರ್ಖರಿದ್ದಷ್ಟೂ ಇಂಥ ಪ್ರಯೋಗಕ್ಕೆ ಯಶಸ್ಸು ಜಾಸ್ತಿ.

**ಕಮಲಮ್ಮ :** ಎಂಥ ಪ್ರಯೋಗ ?

**ಮೋಹನ :** ಅಮ್ಮಾ, ದತ್ತ ಮಾವ ಒಂದು ಪ್ರಯೋಗದಿಂದ ಕಳ್ಳನನ್ನು ಕಂಡುಹಿಡಿಯುತ್ತಾನಂತೆ.

**ಕಮಲಮ್ಮ :** ನಿಜವೇ ! ಅದು ಸಾಧ್ಯವೇ ! ಅದ್ಹೇಗೆ ?

**ದತ್ತ ಮಾವ :** ಮಂತ್ರದಿಂದಾಗಲಿ, ಹೆದರಿಸಿ ಬೆದರಿಸಿಯಾಗಲಿ, ಒಟ್ಟಿನಲ್ಲಿ ಅವರ ಅಜ್ಞಾನದ ಲಾಭ ಪಡೆದು ನಾವು ನಮ್ಮ ಬಲೆಯನ್ನು ಬೀಸಬೇಕು. ಪ್ರಾಣಿ ಬಲೆಯೊಳಗೆ ಬೀಳುತ್ತಿರುವುದನ್ನು ಕಾಯುತ್ತಿರಬೇಕು.

ಈಗ ಕೇಳಿರಿ....ನನಗೆ ಏಕೆ, ಏನು ಎಂತ ಒಂದೂ ಪ್ರಶ್ನೆಮಾಡದೆ ನೀವೆಲ್ಲರೂ ನಾನು ಹೇಳಿದಂತೆ ಕೇಳಿದರೆ ಇಂದು ಮಧ್ಯರಾತ್ರಿಯೊಳಗಾಗಿ ನಾನು ಕಳ್ಳನನ್ನು ಬಲೆಯೊಳಗೆ ಬೀಳಿಸಿ ಬಂಧಿಸುತ್ತೇನೆ. ಆಯಿತಲ್ಲವೆ ?

**ಸುಂದರರಾಯ** : ನೀವು ನಿಮ್ಮ ಬೇಟೆ ಪ್ರಾರಂಭಿಸುವ ಪೂರ್ವದಲ್ಲಿ ನಾನು C. I. D. ಸಾಖಳ್‌ಕರರಿಗೆ ಒಳಗೆ ಕರೆದು ಎಲ್ಲವನ್ನೂ ತಿಳಿಸುತ್ತೇನೆ. ಒಮ್ಮೆ ಅವರನ್ನು ಕರೆದ ನಂತರ ಅವರ ಬೆನ್ನುಹಿಂದೆ ಈ ವಿಷಯುವನ್ನು ಬಗೆಹರಿಸುವುದು ಸರಿಯಾದುದಲ್ಲ........

**ದತ್ತ ಮಾವ** : ಅದು ನಿಜ....ಅವರೂ ಅವಶ್ಯ ಬರಲಿ. ಆದರೆ ಕಾಯಿದೆದೃಷ್ಟಿಯಿಂದ ಏನಾದರೂ ಆತಂಕವನ್ನು ಒಡ್ಡ ದಿದ್ದರಾಯಿತು.

**ಸುಂದರರಾಯ** : ಮೋಹನ, ಸಾಖಳ್‌ಕರರು ತೋಟದಲ್ಲಿ ಇನ್ನೂ ಇರಬಹುದು. ಕರೆದುಕೊಂಡು ಬಾ.

( ಮೋಹನ ಹೋಗುವನು. )

**ಕಮಲಮ್ಮ** : ನಿನ್ನ ಪ್ರಯೋಗಪರೀಕ್ಷೆ ಯಾವಾಗ ಪ್ರಾರಂಭವಾಗುವುದು.

**ದತ್ತ ಮಾವ**: ಬೇಕಾದಾಗ....ಇಂದಿನ ರಾತ್ರಿಯಾದರೂ ಆಗಬಹುದು. ಆಗಬಹುದಲ್ಲವೆ ? ನನಗೆ ಹೆಚ್ಚೆಂದರೆ ತಯಾರಿಗಾಗಿ ಒಂದು ಗಂಟೆ ಹೊತ್ತು ಸಿಕ್ಕರೆ ಸಾಕು.

( ಮೋಹನ ಮತ್ತು ಸಾಖಳ್‌ಕರರು ಬರುವರು. )

**ಸುಂದರರಾಯ** : ಇವರು C. I. D. ಶ್ರೀ ಸಾಖಳ್‌ಕರರು ;

ಸಾಖಳ್‌ಕರರೆ, ಇವರು ನನ್ನ ಭಾವ ದತ್ತಮೂರ್ತಿ ರಾಯರು. ( ಇಬ್ಬರೂ ಪರಸ್ಪರರಿಗೆ ನಮಸ್ಕಾರ ಮಾಡು ವರು.) ಸಾಖಳ್‌ಕರರೇ, ನಮ್ಮ ಭಾವ ಈ ಕಳ್ಳತನದ ಪರಿಶೀಲನೆಯಲ್ಲಿ ನನಗೆ ಸಹಾಯಮಾಡುತ್ತಾರಂತೆ. ಅವನನ್ನು ಕಂಡುಹಿಡಿಯುವ ಅವರ ರೀತಿ-ನೀತಿಗಳು ಏನೇ ಇದ್ದರೂ ನಮಗೆ ಕಳ್ಳ ಯಾರೆಂಬುದು ಗೊತ್ತಾದರೆ ನಾವು....ಎಂದರೆ ನೀವು....ಅವನ ಕೈಗೆ ಬೇಡಿ ತೊಡಿಸಬಹುದಲ್ಲ ?

**ಸಾಖಳ್‌ಕರ್** : ಆಗಲಿ........ಒಟ್ಟಿನಲ್ಲಿ ಬೇಗನೆ ಕಳ್ಳನ ಪತ್ತೆ ಯಾದರೆ ಆಯಿತು. ಯಾವ ರೀತಿಯಿಂದ ಕಂಡು ಹಿಡಿಯುತ್ತಾರಂತೆ ?

**ದತ್ತ ಮೂ**: ಸಾಖಳ್‌ಕರರೆ, ನಾನು ಪತ್ತೇದಾರಿಕೆಯ ಅನೇಕ ವಿಷಯಗಳನ್ನು ತಿಳಿದವನಲ್ಲ. ಇದು ವರೆಗೂ ಯಾವ ನೊಬ್ಬ ಕಳ್ಳನನ್ನು ಬಂಧಿಸಿದವನೂ ಅಲ್ಲ. ಆದರೂ ನನಗೆ ಇಂತಹ ವಿಷಯಗಳಲ್ಲಿ ಕುತೂಹಲ ತುಂಬಾ ಇದೆ. ಮಾನಸ ಶಾಸ್ತ್ರ, ತರ್ಕಶಾಸ್ತ್ರದಲ್ಲಿ ಸ್ವಲ್ಪ ಆಸಕ್ತಿ ಇದೆ. ಅದರಿಂದ ನಾನು ಹಿಡಿಯುವ ದಾರಿ ನಿಮಗೆ ವಿಚಿತ್ರವಾಗಿ ಕಾಣಬಹುದು. ನಿಮ್ಮ ಲೆಕ್ಕಾಚಾರ ದಂತೆ ಕಳ್ಳನನ್ನು ಹಿಡಿಯುವ ಪ್ರಾಚೀನ ಇಲ್ಲವೆ ಆಧುನಿಕ ಪದ್ಧತಿಯೂ ಅದಾಗಿರಲಾರದು. ನಿಮಗೆ ನನ್ನ ಮಾತಿನಲ್ಲಿ ಬೇಸರಬರಬಹುದು....

**ಸಾಖಳ್‌ಕರ್** : ಹಾಗೇನಿಲ್ಲ....ಹೇಳಿರಿ, ಹೇಳಿರಿ.

**ದತ್ತ ಮೂವ** : ನೋಡಿ ಸಾಖಳ್‌ಕರರೆ, ಬಹುಶಃ ನಿಮಗೆ ತಿಳಿ ದಿರುವಂತೆ ಕಳ್ಳರಲ್ಲಿ ನಾನಾ ಪ್ರಕಾರದವರಿದ್ದು,

ಅವರು ಮಾಡುವ ಕಳ್ಳತನಗಳೂ ಬೇರೆ ಬೇರೆ ತರ-ದ್ದಿರುತ್ತವೆ. ಈಗಿನ ನಮ್ಮ ಪರಿಸ್ಥಿತಿಯಲ್ಲಿ ಕಳ್ಳರನ್ನು ಮುಖ್ಯವಾಗಿ ಎರಡು ವರ್ಗಗಳಲ್ಲಿ ವಿಂಗಡಿಸಬಹುದು. ಸತತವಾಗಿ ಕೆಟ್ಟ ಪ್ರವೃತ್ತಿಯಲ್ಲಿಯೇ ನಿರತರಾಗಿದ್ದು ಕಳ್ಳತನವೇ ಜೀವನಕ್ಕೆ ಅಂಟಿಕೊಂಡಿದ್ದ ಚಟ ವಾಗಿದ್ದಂತವರ ಒಂದು ಗುಂಪು; ಇನ್ನು ಕಾಲಮಾನ ಪರಿಸ್ಥಿತಿಗೆ ಒಳಗಾಗಿ ಉಪಾಯವಿಲ್ಲದೆ, ವಿಚಾರ ಮಾಡದೆ, ಒಮ್ಮೆಲೆ ಕಳ್ಳತನ ಮಾಡಿದಂತವರ ಎರ-ಡನೇ ಗುಂಪು. ಇವರನ್ನು ಯಾವುದೇ ಹೆಸರಿನಿಂದ ನೀವು ಕರೆಯಬಹುದು. ಒಬ್ಬ ವೃತ್ತಿಯಿಂದ ಕಳ್ಳ, ಇನ್ನೊಬ್ಬ ಪರಿಸ್ಥಿತಿಯಿಂದ ಕಳ್ಳ; ಒಬ್ಬ ಕಾಯಂ ಕಳ್ಳ, ಇನ್ನೊಬ್ಬ ತಾತ್ಕಾಲಿಕ ಕಳ್ಳ. ಒಟ್ಟಿನಲ್ಲಿ ಇಂದಿನ ನಮ್ಮ ಕಳ್ಳ ಈ ಎರಡನೇ ಗುಂಪಿಗೆ ಸೇರಿ ದವನೆಂದು ನನ್ನ ತರ್ಕ. ನಿಮ್ಮ ಅಭಿಮತವೇನು?

**ಸಾಖಳ್‌ಕರ್** : ಅದು ಸರಿ; ಸರಿಯಾಗಿದೆ ನಿಮ್ಮ ಸಿದ್ಧಾಂತ.

**ದತ್ತ ಮಾವ** : ಇನ್ನು ಪರಿಸ್ಥಿತಿಯಿಂದ ಕಳ್ಳನಾದವನ ಮನ ಸ್ಥಿತಿಗೂ ವೃತ್ತಿಯಿಂದ ಕಳ್ಳನಾದವನ ಮನಸ್ಥಿತಿಗೂ ಬಹಳ ಅಂತರವಿದೆ. ತಾತ್ಕಾಲಿಕವಾಗಿ ಕಳ್ಳತನ ಮಾಡಿದವನ ಕಳುವಿನ ಕೃತ್ಯ ಅಷ್ಟು ಪರಿಪೂರ್ಣ ವಾಗಿರುವುದಿಲ್ಲ. ಅಲ್ಲದೆ, ಅವನ ಚಲನವಲನದಲ್ಲಿ ಮತ್ತು ಮಾತುಕತೆಯಲ್ಲಿ ವ್ಯತ್ಯಾಸವನ್ನು ಕೂಡಲೆ ಗುರುತಿಸಬಹುದು. ತಾನು ಸಿಕ್ಕಿಬೀಳಬಹುದೆಂಬ ಅಂಜಿಕೆ ಸದಾಕಾಲ ಅವನನ್ನು ಕಾಡುತ್ತಲೇ ಇರು-ತ್ತದೆ. ಈ ಅಂಜಿಕೆಯನ್ನೇ ಮುಖ್ಯವಾಗಿ ಉಪ-

ಯೋಗಿಸಿಕೊಂಡು ಕಳ್ಳನಿಗೆ ಬಲೆ ಬೀಸಬೇಕೆಂದು ನನ್ನ ವಿಚಾರ. ಈ ನನ್ನ ಉಪಾಯ ತೀರ ಕೆಳದರ್ಜೆಯದು ಮತ್ತು ಈ ಪ್ರಯೋಗದಿಂದ ಮನೆಯ ಕೆಲವರ ಮನನೋಯಬಹುದೆಂದು ನಿಮಗೆಲ್ಲ ಅನಿಸುವುದು ಸ್ವಾಭಾವಿಕ. ಆದರೆ ವಿಚಾರಮಾಡಿದರೆ ಕಳ್ಳನ ಹೊರತಾಗಿ ಉಳಿದವರಿಗೆ ಯಾವ ಅಪಮಾನವೂ ಇಲ್ಲ ಎಂದು ನನ್ನ ಅಭಿಮತ. ನಿಮ್ಮ ಅಭಿಪ್ರಾಯವೇನು ?

**ಸಾಖಳ್‌ಕರ್ :** ನಿಮ್ಮ ಪ್ರಯೋಗದ ರೀತಿ ಯಾವುದೆಂದು ಸರಿಯಾಗಿ ತಿಳಿಯದಿದ್ದರೂ ನೀವು ಹೇಳುವುದರಲ್ಲಿ ನಿಜಾಂಶ ಇಲ್ಲದೆ ಇಲ್ಲ. ಹೇಗಿದ್ದರೂ ಕಳ್ಳನನ್ನು ಕಂಡುಹಿಡಿದರಾಯಿತು. ಇನ್ನು ನಿಮ್ಮ ಕಾರ್ಯದಲ್ಲಿ ನನ್ನ ಸಹಾಯ ಬೇಕಿದ್ದರೆ ಹೇಳಿರಿ. ನಾನು ಸದಾ ಸಿದ್ಧ.

**ದತ್ತ ಮಾಮ :** ಆನಂದವಾಯ್ತು. ಕಮಲಾ, ರಾತ್ರಿಯಾದ ಮೇಲೆ ಈ ಮನೆಯ ಆಳು-ಕಾಳುಗಳೆಲ್ಲರನ್ನೂ ಒಂದು ಕಡೆಗೆ, ಎಂದರೆ ಇದೇ ಕೋಣೆಯಲ್ಲಿ ಕೂಡುವಂತೆ ವ್ಯವಸ್ಥೆ ಮಾಡುವೆಯಾ ? ಇದು ಎಷ್ಟು ಗಂಟೆಯ ಸುಮಾರಿಗೆ ಆಗಬಹುದು ?

**ಕಮಲಮ್ಮ :** ಆಗಲಿ. ಸುಮಾರು ೯ ಗಂಟೆಗೆ ಆಗಬಹುದು.

**ದತ್ತ ಮಾಮ :** ಸರಿ. ಸರಿಯಾಗಿ ೯ ಘಂಟೆಗೆ ಇಲ್ಲಿ.... ಸಾಖಳ್‌ಕರರೇ, ನೀವು ಅಷ್ಟು ಹೊತ್ತಿಗೆ ಎಲ್ಲಿರುತ್ತೀರಿ ? ನಾನು ಸುಮಾರು ೯-೩೦ಕ್ಕೆ ನಿಮಗೆ ಫೋನ್ ಮಾಡಿ ಕಳ್ಳ ಯಾರೆಂಬುದನ್ನು ತಿಳಿಸುತ್ತೇನೆ. ಆಗ ನೀವು ಬರಬಹುದು.

**ಸಾಖಳ್‌ಕರ್ :** ನಾನು ಅಷ್ಟು ಹೊತ್ತಿಗೆ ಪೋಲಿಸ್ ಸ್ಟೇಶನ್ನಿನಲ್ಲೇ ಇರುತ್ತೇನೆ. ನೀವು ನೇರವಾಗಿ ಅಲ್ಲಿಗೇ ಫೋನ್ ಮಾಡಿರಿ. ನಾನು ಬರುತ್ತೇನೆ. ನಮಸ್ಕಾರ ಸುಂದರರಾಯರೇ....( ತೆರಳುವನು. )

**ದತ್ತ ಮಾವ** · ಇವರು ಸರಳ ಹೃದಯುದವರಿದ್ದಾರೆ. ಪೋಲಿಸ್ ಖಾತೆಯಲ್ಲಿ ಇಷ್ಟು ಹೊಂದಿಕೊಂಡು ಹೋಗುವ ಸ್ವಭಾವದವರು ದೊರಕುವುದು ವಿರಳ.

**ಸುಂದರರಾಯ** · ಸಾಖಳ್‌ಕರರು ಎಲ್ಲರಿಗೂ ಬೇಕಾದವರು. ಈಗ ನಿಮ್ಮ ಉಪಾಯ ಯಾವುದು ಹೇಳಿ ನೋಡೋಣ ?

**ದತ್ತ ಮಾವ :** ಹುಂ. ಕಮಲಾ, ಒಂದು ದೊಡ್ಡ ತಪ್ಪಲೆ ಇಲ್ಲವೆ ಇಡ್ಲಿ ಪಾತ್ರೆ ಇದೆಯೆ ?

**ಕಮಲಮ್ಮ** · ಇದೆ ...ಆದರೆ ಅಂಥ ಪಾತ್ರೆಯಿಂದ ಏನು ಪ್ರಯೋಜನ ?

**ದತ್ತ ಮಾವ :** ಅದೇನೆ ಇರಲಿ. ನನಗೆ ಬೇಕಾಗಿದೆ....ಅಲ್ಲದೆ ನನಗೆ ಒಂದು ಕೋಳಿಮರಿಯೂ ಬೇಕು.

**ಮೋಹನ :** ಜೀವಂತ ಕೋಳಿಮರಿಯೆ ?

**ದತ್ತ ಮಾವ :** ನಿಶ್ಚಯವಾಗಿಯೂ ಹೌದು.

**ಸುಂದರರಾಯ :** ಇದನ್ನು ಕೇಳಿದರೆ ಜಾದುಗಾರನ ನೆನಪಾಗುತ್ತದೆ. ಜಾದುಗಾರನ ಜಾದುಕಟ್ಟಿಗೆ ಮತ್ತು ಕರವಸ್ತ್ರ ಬೇಡವೆ ?

**ಕಮಲಮ್ಮ :** ಇಲ್ಲವಾದಲ್ಲಿ ಮನುಷ್ಯರ ತಲೆಬುರುಡೆ, ಕೈಕಾಲುಗಳ ಎಲುಬು, ಒಣಗಿದ ಮೊಸಳೆ ಮೊದಲಾದವು ಬೇಕಾಗಬಹುದೆ ?

**ದತ್ತ ಮಾವ :** ಅವ್ಯಾವುವೂ ಬೇಡ........ನಾನು ನಿಮಗೆ ಮೊದಲೇ ಹೇಳಲಿಲ್ಲವೆ ? ಕಾರ್ಯ ಮುಗಿಯುವ ವರೆಗೆ ನಾನು ಎಷ್ಟು ಹೇಳುತ್ತೇನೋ ಅಷ್ಟನ್ನು ಮಾಡಬೇಕೇ ವಿನಃ ಅದು ಇದು ಅಂತ ನಡುವೆ ಬಾಯಿಹಾಕಿ ಕೆಲಸ ಕೆಡಿಸಬಾರದು....ಇನ್ನು ನಮಗೆ ಬೇಕಾದ ಒಂದು ಸಾಮಾನೆಂದರೆ ಒಂದು ಸಣ್ಣ ಮೇಣಬತ್ತಿ.

**ಮೋಹನ :** ಇದನ್ನೆಲ್ಲ ನೋಡಿದರೆ ಒಂದು ಅದ್ಭುತರಮ್ಯ ಸನ್ನಿವೇಷ ನಿರ್ಮಾಣವಾಗಲಿದೆ ಎಂದೆನಿಸುವುದು ಮಾವಾ. ನೀನು ಮಾಡುವುದಾದರೂ ಏನೆಂದು ಸ್ವಲ್ಪ ಹೇಳುವೆಯಾ ?

**ದತ್ತ ಮಾವ ·** ಇಲ್ನೋಡು ಮಗು....ಬುದ್ಧಿವಂತ ಮಂತ್ರ ವಾದಿ ತಾನು ಮಾಡಲಿರುವ ಮಾಟವನ್ನು ಮೊದಲೇ ಹೇಳಿಬಿಡುವುದಿಲ್ಲ. ರಾತ್ರಿಯ ವರೆಗೆ ಸಮಾಧಾನ ದಿಂದ ನಿರೀಕ್ಷಿಸುತ್ತಿದ್ದರೆ ಅಷ್ಟರಲ್ಲಿ ಎಲ್ಲ ಗುಟ್ಟೂ ರಟ್ಟಾಗುವುದು. (ಎದ್ದು ನಿಂತು) ಅಂತು ೯ ಘಂಟೆಗೆ ನಾವೆಲ್ಲರೂ ಇಲ್ಲಿ ಕೂಡುವುದು ಖಂಡಿತವಲ್ಲವೆ ? ಹಾಂ. ಈ ಬಾಗಿಲಿನಿಂದ ಎಲ್ಲಿ ಹೋಗಬಹುದು ?

**ಸುಂದರರಾಯ :** ಇದರಿಂದ ನಡುಮನೆಗೆ ಮತ್ತು ಅಡಿಗೆ ಮನೆಗೆ ಹೋಗಬಹುದು.

**ದತ್ತ ಮಾವ :** ಹಾ, ಹಾ ! ಈಗ ನೆನಪಿಗೆ ಬಂತು. ಈ ಬಾಗಿಲಿನಿಂದ ನಡುಮನೆಗೆ ಹೋಗಿ ನೆಟ್ಟಗೆ ಬಲಕ್ಕೆ ತಿರುಗಿ ಅಡಿಗೆ ಮನೆಗೆ ಬಂದು ಈ ಬಾಗಿಲಿನಿಂದ ತಿರುಗಿ ಇಲ್ಲಿಗೆ ಬರಬಹುದಲ್ಲವೆ ?

**ಸುಂದರರಾಯ** : ಸರಿ, ಸರಿ, ಹೀಗೆ ಒಂದು ಸುತ್ತುಹಾಕಿ ಬರಬಹುದು.

**ದತ್ತ ಮಾವ** : ಹಾಗಿದ್ದರಂತೂ ಇನ್ನೂ ಉತ್ತಮವಾಯ್ತು. ಈಗ ನಿಮಗೆ ಎಲ್ಲ ಜ್ಞಾಪಕವಿದೆಯಲ್ಲ.... ಒಂದು ದೊಡ್ಡ ಪಾತ್ರೆ, ಒಂದು ಜೀವಂತ ಕೋಳಿಮರಿ ಮತ್ತು ಒಂದು ಸಣ್ಣ ಮೇಣಬತ್ತಿ, ಈ ಮೂರು ಸಂಜೆಯ ಒಳಗಾಗಿ ತಯಾರಿರಬೇಕು.

**ಕಮಲಮ್ಮ** : ಆಗಲಿ, ಎಲ್ಲವನ್ನೂ ತರಿಸಿ ಇಡುತ್ತೇನೆ.

**ಮೋಹನ** : ಅಂತು ಇಂತು ಇಂದು ದೊಡ್ಡದೊಂದು ತಮಾಷೆ ನಡೆಯಲಿದೆ. ನಿಶ್ಚಯವಾಗಿಯೂ ಕಳ್ಳ ನನ್ನು ಗುರುತಿಸಬಹುದಲ್ಲವೇ ಮಾವಾ ?

**ಸುಂದರರಾಯ** : ಮತ್ತೆ ನೂರರ ನೋಟು ತಿರುಗಿ ಸಿಗಬಹು ದಲ್ಲವೇ ?

**ದತ್ತ ಮಾವ** : ಅದೆಲ್ಲವೂ ಆ ಪಾತ್ರೆ, ಆ ಕೋಳಿಮರಿ ಮತ್ತು ಆ ಮೇಣಬತ್ತಿಗಳನ್ನು ಅವಲಂಬಿಸಿದೆ.

( ತೆರೆ ಒಮ್ಮೆಲೆ ಜಾರುವುದು. )

## ದೃಶ್ಯ—೨

[ ಮೊದಲಿನ ದೃಶ್ಯದಂತೆಯೆ; ಅದೇ ಕೋಣೆ. ೯ ಗಂಟೆ ಬಾರಿಸಿದ ಧ್ವನಿ ಕೇಳಿಬರುತ್ತದೆ. ರಂಗದ ಮೇಲೆ ಎರಡು ಗುಂಪುಗಳು ಬೇರೆ ಬೇರೆಯಾಗಿ ಕುಳಿತಿದ್ದುದು ಕಂಡುಬರುತ್ತದೆ. ಎಡಗಡೆಗೆ ಟೇಬಲ್ಲಿನ ಬಳಿಯಲ್ಲಿ ಅನುಕ್ರಮವಾಗಿ ದತ್ತಮಾವ, ಸುಂದರರಾಯ, ಕಮಲಮ್ಮ ಕುಳಿತಿದ್ದಾರೆ ಅವರು ಕುಳಿತ ಖುರ್ಚಿಯ ಹಿಂದೆ ಮೋಹನ ನಿಂತಿದ್ದಾನೆ ಬಲಗಡೆಗೆ ನೆಲದ ಮೇಲೆ ಇನ್ನುಳಿದ ಕೆಲಸಗಾರರೆಲ್ಲ ಪವಡಿಸಿದ್ದಾರೆ. ತೆರೆ ಮೇಲೇಳುವಾಗ ಆಳುಕಾಳುಗಳೆಲ್ಲ ಗುಜು ಗುಜು ಮಾತನಾಡಿಕೊಳ್ಳುತ್ತಿದ್ದು, ಕುಪಿತರಾದಂತೆ ಕಾಣುತ್ತಿದೆ ಸುಂದರರಾಯರು ಎಲ್ಲರೂ ಶಾಂತರಾಗುವಂತೆ ಟೇಬಲನ್ನು ಬಡಿಯುತ್ತಾರೆ ]

**ದತ್ತ ಮಾವ :** ಈಗಾಗಲೆ ನಾನು ಹೇಳಿದ್ದೆಲ್ಲ ಸ್ಪಷ್ಟವಾಗಿ ಎಲ್ಲರಿಗೂ ಅರ್ಥವಾಯಿತಲ್ಲ....ಇನ್ನೂ ಯಾರಿಗಾದರೂ ಸರಿಯಾಗಿ ತಿಳಿಯದೆ ಇದ್ದಲ್ಲಿ ಮತ್ತೊಮ್ಮೆ ಹೇಳುತ್ತೇನೆ ಕೇಳಿರಿ....ಸರಿಯಾಗಿ ಈ ಸಾರೆ ಕೇಳಿಕೊಳ್ಳಿರಿ. ಆ ಮೇಲೆ ನಾವು ದೀಪವನ್ನು ಆರಿಸಿ ಕಾರ್ಯ ಪ್ರಾರಂಭಿಸುತ್ತೇವೆ. ಹುಂ, ನೋಡಿ ಅಲ್ಲಿ ನಡುಮನೆಯಲ್ಲಿ ನಟ್ಟ ನಡುವೆ ಒಂದು ಟೇಬಲ್ಲಿದೆ. ಟೇಬಲ್ಲಿನ ಮೇಲೆ ತಲೆ ಕೆಳಗೆ ಮಾಡಿಟ್ಟ ಒಂದು ತಪ್ಪಲೆ ಇದೆ....ಎಂದರೆ ಆ ಮೇಜಿನ ಮೇಲೆ ಬುಡಮೇಲಾಗಿ ಇಟ್ಟ ಒಂದು ಪಾತ್ರೆಯಿದೆ. ಆ ಪಾತ್ರೆಯ ಕೆಳಗೆ ಒಂದು ಕೋಳಿಯ ಮರಿಯನ್ನು ಮುಚ್ಚಿ ಇಡಲಾ-

ಗಿದೆ. ಕೋಣೆಯಲ್ಲಿದ್ದ ದೀಪಗಳನ್ನು ಆರಿಸಿ ಕೇವಲ ಒಂದು ಸಣ್ಣ ಮೇಣಬತ್ತಿಯನ್ನು ಹೊತ್ತಿಸಲಾಗು ವುದು. ಮತ್ತು ಆ ಮೇಣಬತ್ತಿಯನ್ನು ಆ ಟೇಬಲ್ಲಿನ ಬುಡದಲ್ಲಿ ಇಡಲಾಗುವುದು. ನಿಮಗೆ ಕೋಣೆಯಲ್ಲಿ ಸಂಚರಿಸಲಿಕ್ಕೆ ಸಹಾಯವಾಗುವಷ್ಟು ಬೆಳಕನ್ನು ಆ ಮೇಣಬತ್ತಿ ಒದಗಿಸುವುದೇ ಹೊರತು ಟೇಬಲ್ಲಿನ ಮೇಲಿನ ವಸ್ತುಗಳು ಕಾಣಿಸಲಾರವು.

( ಸೇವಕರ ಗುಜುಗುಜು )

**ಸುಂದರರಾಯ** : ಸುಮ್ಮನಿರಿ ಎಲ್ಲರೂ.

**ದತ್ತ ಮಾವ** : ನೀವು ಒಬ್ಬೊಬ್ಬರಾಗಿ ಈ ಕೋಣೆಯಿಂದ ಹೊರಟು ನೇರವಾಗಿ ಹೋಗಿ ಟೇಬಲ್ಲಿನ ಮೇಲಿನ ಪಾತ್ರೆಯ ಮೇಲೆ ಬೆರಳಿನಿಂದ ಹೀಗೆ (**ಅಭಿನಯಿಸಿ ತೋರಿಸುವನು.**) ನಾಕಷ್ಟು ಬಲವಾಗಿ ಒತ್ತಬೇಕು. ಆ ಮೇಲೆ ಹಾಗೆಯೇ ಮುಂದೆ ಹೋಗಿ ಬಲಗಡೆಗೆ ತಿರುಗಿ—ಅಲ್ಲಿಯ ಬಾಗಿಲು ತೆರೆದಿದೆ—ಅಡಿಗೆಮನೆಗೆ ಬಂದು ಅಲ್ಲಿಂದ ಈ ಇನ್ನೊಂದು ಬಾಗಿಲಿನಿಂದ ಇಲ್ಲಿಗೆ ಬಂದು ನೀವು ಈಗ ಕುಳಿತಿರುವಲ್ಲಿಯೇ ಕುಳಿತುಕೊಳ್ಳಬೇಕು. ಇಲ್ಲಿಂದ ಹೊರಟ ನಂತರ ಮುಂದೆ ಆ ಬಗ್ಗೆ ಒಂದಕ್ಷರವನ್ನೂ ಯಾರೂ ಮಾತ ನಾಡಬಾರದು. ತಿರುಗಿ ಬಂದು ಕುಳಿತ ಮೇಲೆಯೂ ಮೌನವಾಗಿರಬೇಕು. ಇನ್ನು ಕೇಳಿರಿ....ನಿಜವಾದ ಕಳ್ಳನು ಆ ಪಾತ್ರೆಯ ಮೇಲೆ ಕೈಯಿಟ್ಟಾಗ ಅದರ ಬುಡದಲ್ಲಿದ್ದ ಕೋಳಿಮರಿ ಒದರುವುದು. ಈಗ ಎಲ್ಲರೂ ಸಿದ್ಧರಾಗಿರಿ. ಹುಂ....ಮೋಹನ, ದೀಪ

ಆರಿಸು ....... [ ದೀಪಗಳೆಲ್ಲವೂ ಆರಿಸಲ್ಪಡುವವು. ವ್ಯಕ್ತಿಗಳನ್ನು ಗುರುತಿಸುವಷ್ಟು ಮಾತ್ರ ಮಂದಪ್ರಕಾಶವು ರಂಗವನ್ನು ಆವರಿಸಿರುವುದು. ಕೇವಲ ಅವರ ಛಾಯೆ ಗಳು ಕಂಡುಬರುತ್ತಿವೆ. ದತ್ತ ಮಾವ ಒಳಗೆ ಹೋಗಿ ಟೇಬಲ್ಲಿನ ಕೆಳಗಡೆಗೆ ಮೋಂಬತ್ತಿಯನ್ನು ಹಚ್ಚಿಟ್ಟು ಬರು ವನು. ಎಲ್ಲ ಕಡೆಗೂ ಮೌನ ಆವರಿಸಿದೆ. ]

**ಸುಂದರರಾಯ:** ನಾಗಕ್ಕ, ನೀನೇ ಮೊದಲು ಹೋಗು- ನಿನಗೆ ಏನೇನು ಮಾಡಬೇಕೆಂದು ಸರಿಯಾಗಿ ತಿಳಿದಿದೆ.

**ನಾಗತ್ತೆ :** ಹೂಂ. ಎಲ್ಲರ ಕಣ್ಣು ನನ್ನ ಮೇಲೇ ಇದೆ. ಆದರೆ ಸತ್ಯಕ್ಕೆ ಎಂದೂ ಸಾವಿಲ್ಲ. ನಾನು ತೆಗೆದಿಲ್ಲ ಎಂದು ನನ್ನ ಆತ್ಮಕ್ಕೆ ಚನ್ನಾಗಿ ಗೊತ್ತು....ಆದ್ದರಿಂದ ನಾನು ಯಾವುದಕ್ಕೂ ಹೆದರೋದೇ ಇಲ್ಲ....ಆದರೆ ಈ ರೀತಿಯಿಂದ ನನ್ನನ್ನು ಕರೆಯಬಾರದಾಗಿತ್ತು ..

**ಸುಂದರರಾಯ :** ನೀನು ಅಂಥ ಕೆಲಸ ಮಾಡುವವಳಲ್ಲ ಎನ್ನುವುದು ನನಗೆ ಗೊತ್ತು....ಆದರೂ ಉಪಾಯ ವಿಲ್ಲ....ಹೂಂ, ಹೋಗು—

**ನಾಗತ್ತೆ :** ಹುಂ. ಹೋಗುತ್ತೇನೆ........ದೇವರಿಗೆ ಕಣ್ಣಿದೆ. ( ನಡುಮನೆಗೆ ಹೋಗಿ ಸ್ವಲ್ಪಹೊತ್ತಿನಲ್ಲಿ ಸುತ್ತುಹಾಕಿ ಅಡಿಗೆಮನೆ ಬಾಗಿಲಿನಿಂದ ಬಂದು ಮೊದಲಿನ ಸ್ಥಳದಲ್ಲಿ ಕುಳಿತುಕೊಳ್ಳುವಳು. )

**ರಾಮು :** ಸ್ವಾಮಿ....ಇದನ್ನೆಲ್ಲ ನೆನೆಸಿಕೊಂಡರೆ ನನಗೇಕೋ ಕಣ್ಣಿಗೆ ಕತ್ತಲೆ ಬಂದಂತಾಗುತ್ತದೆ- ಏಳಲು ಕಾಲೇ ಬರುವುದಿಲ್ಲ.

**ಸುಂದರರಾಯ :** ರಾಮು, ಎಂಥ ಹೇಡಿಯೋ ನೀನು ?

ಧೈರ್ಯತಂದುಕೊಂಡು ಎದ್ದು ನಿಲ್ಲು. ನೀನು ಕಳ್ಳ ನಾಗಿರದಿದ್ದರೆ ನೀನು ಹೆದರುವ ಕಾರಣವೇ ಇಲ್ಲ. ಹುಂ, ಹೋಗು.

( ರಾಮು ಯಥಾ ಪ್ರಕಾರ ಕಾರ್ಯ ನಿರ್ವಹಿಸಿ ಬರುವನು. )

**ಸುಂದರರಾಯ :** ಮಾದ, ಈಗ ನೀನು ಮುಟ್ಟಿ ಬಾ........ ಹೋಗು.

( ಮಾದ ತಡವರಿಸುತ್ತ ಹೋಗುವನು—ಯಥಾಪ್ರಕಾರ )

**ಸುಂದರರಾಯ :** ಭಾಗೀರತಿ....ನೀನು ನಡೆಯಮ್ಮ.

( ಭಾಗೀರತಿ ಬೆದರಿಕೆಯಿಂದ ತಟಸ್ಥಳಾಗಿ ನಿಲ್ಲುವಳು. )

**ನಾಗತ್ತೆ:** ಹೋಗು ಭಾಗೀರತಿ—ಹೆದರಬೇಡಾ. ನೀನು ಹೆದರು ವಂತಹದೇನಿಲ್ಲ. ಅಲ್ಲಿ ನಾನು ಹೋಗಿ ಬಂದಿಲ್ಲವೆ ? ಬೇಗ ಹೋಗಿ ಮುಟ್ಟಿ ಬಂದುಬಿಟ್ಟರಾಯಿತು. ನಮ್ಮ ಮನಸ್ಸು ಸ್ವಚ್ಛ ಇದ್ದಾಗ ದೇವರ ಹೆಸರನ್ನು ಸ್ಮರಿಸಿ, ಧ್ಯಾನ ಕಟ್ಟಿಕೊಂಡು ಮುಟ್ಟಿಬಿಟ್ಟರೆ ಏನೂ ಆಗುವುದಿಲ್ಲ. ಎಲ್ಲ ಒಂದು ನಿಮಿಷದಲ್ಲಿ ಮುಗಿದು ಹೋಗುತ್ತದೆ .. ಹೋಗಮ್ಮಾ.

( ಭಾಗೀರತಿ ಹೋಗಿಬರುವಳು. )

**ಸುಂದರರಾಯ :** ಜಾಫರ್, ಈಗ ನಿನ್ನ ಪಾಳಿ.

( ಜಾಫರ್ ಥಟ್ಟನೆ ಎದ್ದು ಮುಟ್ಟಿ ಬಂದು ಕುಳಿತುಕೊಳ್ಳುವನು. )

**ಸುಂದರರಾಯ :** ನಾರಾಯಣ.

**ನಾರಾಯಣ :** ( ಸಂಕೋಚಪಡುತ್ತ ) ಸ್ವಾಮಿ........ನಾನು ಯಾಕೆ ಮುಟ್ಟಬೇಕು? ನಾನೇನು ಕಳ್ಳನಲ್ಲ. ದೇವರ ಸಾಕ್ಷಿಯಾಗಿಯೂ ನಾನು ಆ ನೋಟನ್ನು ನೋಡಿಲ್ಲ ....ಎಂದಮೇಲೆ ಈ ಚಿತ್ರವಿಚಿತ್ರ ಹಿಂಸೆಗೆ ನಾನೇಕೆ

ಒಳಗಾಗಬೇಕು ? ನಾನು ಆ ಪಾತ್ರೆಯನ್ನು ಮುಟ್ಟಿ ಬರಬೇಕೆಂಬುದರಲ್ಲಿ ಅರ್ಥವಿಲ್ಲ....ನನ್ನ ಸ್ವಭಾವಕ್ಕೆ ಅದು ಹಿಡಿಸುವುದೇ ಇಲ್ಲ. ನಾನಂತೂ ಹೋಗುವುದಿಲ್ಲ. ( ಕುಳಿತಲ್ಲಿಯೇ ಇರುವನು. )

**ನಾಗತ್ತೆ :** ಇದು ಯಾವ ಮಾತೋ ನಾರಾಯಣ ? ನಾವೆಲ್ಲ ನಮ್ಮ ನಮ್ಮ ಪರೀಕ್ಷೆ ಕೊಡಲಿಲ್ಲವೆ ? ಅದರಲ್ಲಿ ಅವಮಾನ ಎನ್ನುವುದು ಏನಿದೆ ? ಕಾಯಿದೆ ಮತ್ತು ನ್ಯಾಯ ಎಲ್ಲರಿಗೂ ಒಂದೇ ರೀತಿ ಇರಬೇಕು.

**ದತ್ತ ಮಾವ :** ನಾಗಕ್ಕ ಹೇಳಿದ್ದು ಸರಿಯಾಗಿದೆ. ಕಾಯಿದೆ ಎಲ್ಲರಿಗೂ ಒಂದೇ. ಸತ್ಯವಂತನಾಗಿದ್ದಲ್ಲಿ ನೀನು ಭಯಪಡಬೇಕಾದ ಪ್ರಸಂಗವಿಲ್ಲ ; ನ್ಯಾಯ ದೊರೆತೇ ದೊರೆಯುವುದು. ಇನ್ನು ಇಷ್ಟು ಜನರಲ್ಲಿ ನೀನೊಬ್ಬ ಅಂಜುಬುರುಕನಾಗಿ ಸಂಶಯಕ್ಕೆ ಕಾರಣನಾಗುವುದು ಸರಿಯೆ ?

**ರಾಮು :** ( ಮೆಲ್ಲನೆ ) ಅವನೇ ತೆಗೆದವನಾಗಿರಬೇಕು.

**ನಾರಾಯಣ :** ಆಗಲಿ, ನೀವೆಲ್ಲ ನನ್ನ ಬಗ್ಗೆ ಸಂಶಯ ತಾಳುತ್ತಿದ್ದರೆ ನಾನು ಮುಟ್ಟಿ ಬರುತ್ತೇನೆ. ನಾನು ಅಂಜುಬುರುಕನಲ್ಲ ಎನ್ನುವುದನ್ನು ತೋರಿಸುತ್ತೇನೆ. ನಾನು ಕಳ್ಳನಲ್ಲ—ಆದರೂ ಸ್ವಾಮಿ, ಒಂದು ವೇಳೆ ಅಲ್ಲಿದ್ದ ಕೋಳಿಮರಿ ಕೂಗಿದರೆ ನಾನು ಅದರ ಕತ್ತನ್ನು ಮುರಿಯದೆ ಬಿಡುವವನಲ್ಲ....ಮೊದಲಿಗೇ ಹೇಳಿಬಿಟ್ಟಿರುತ್ತೇನೆ.

( ಎದ್ದು ಒಳಗೆ ಹೋಗುವನು. ಅವನು ತಿರುಗಿ ಬರುವವರೆಗೂ ಮಿಕ್ಕವರಲ್ಲಿ ಕುತೂಹಲ ಆವರಿಸಿದೆ. )

**ನಾರಾಯಣ :** ( ಹೋಗಿ ಬಂದು ತನ್ನ ಸ್ಥಾನದಲ್ಲಿ ತಿರುಗಿ ಕೂರುವ ಮೊದಲು ) ಆಯಿತೇ ಸ್ವಾಮಿ ! ಎಲ್ಲಾ ಮುಗಿಯಿತಲ್ಲ ! ಈಗಲಾದರೂ ನಿಮ್ಮ ಸಂಶಯ ದೂರಾಯಿತಲ್ಲವೆ ?

**ಸುಂದರರಾಯ :** ಇನ್ನು ಕೊನೆಯದಾಗಿ ಸೋಮಯ್ಯ.

**ಸೋಮು :** ಇದ್ದು ಬಿದ್ದುದೆಲ್ಲ ಕೊನೆಯವನ ಮೇಲಂತೆ. ಇದು ವರೆಗೂ ಕೂಗದೆ ಇದ್ದು ಈಗ ಕೂಗಿದರೆ ಅದು ತಪ್ಪಿ ಕೂಗಿರಬಹುದೇ ವಿನಃ ಖಂಡಿತವಾಗಿಯೂ ತಪ್ಪು ನನ್ನದಾಗಲಿಕ್ಕಿಲ್ಲ. ನಾನು ಮುಟ್ಟಿ ಬರುತ್ತೇನೆ.

( ಹೋಗಿಬಂದು ತನ್ನ ಸ್ಥಳವನ್ನಾಕ್ರಮಿಸುವನು. )

**ದತ್ತ ಮೂವ :** ದೀಪವನ್ನು ದೊಡ್ಡದು ಮಾಡಿರಿ. ( ಎದ್ದು ನಿಂತು ) ನಾನು "ಮೂರು" ಎಂದು ಹೇಳಿದ ಕೂಡಲೆ ಎಲ್ಲರೂ ನಿಮ್ಮ ಕೈಗಳನ್ನು ಹೀಗೆ ಮೇಲಕ್ಕೆ ಎತ್ತಿರಿ. Ready ಒಂದು, ಎರಡು, ಮೂರು. ( ಎಲ್ಲರೂ ಕೈಗಳನ್ನು ಮೇಲೆತ್ತುವರು. ನಾರಾಯಣನ ಕೈಯೊಂದನ್ನು ಬಿಟ್ಟು ಉಳಿದ ಎಲ್ಲರ ಬೆರಳುಗಳಿಗೆ ಕಪ್ಪುಕಾಡಿಗೆ ತಗಲಿದೆ. )

**ದತ್ತ ಮೂವ :** ( ನಾರಾಯಣನನ್ನು ತೋರಿಸಿ ) ಕಳ್ಳ ಇಲ್ಲಿದ್ದಾನೆ !

( ಎಲ್ಲರೂ ಹೊರಳಿ ನಾರಾಯಣನನ್ನೇ ನೋಡುವರು. )

**ಕಮಲಮ್ಮ :** ಅದು ಹೇಗೆ ? ನನಗೆ ಅರ್ಥವೇ ಆಗಲಿಲ್ಲ !

**ರಾಮು :** ಕೋಳಿಮರಿ ಕೊನೆಯ ವರೆಗೂ ಒದರಲೇ ಇಲ್ಲ.

**ಸುಂದರರಾಯ :** ( ಅರ್ಥಮಾಡಿಕೊಂಡು ) ವ್ಹಾ....ವ್ಹಾ........

ದತ್ತೂ, ಒಟ್ಟಿನಲ್ಲಿ ಒಳ್ಳೆಯ ಉಪಾಯ ಮಾಡಿಬಿಟ್ಟಿಯಲ್ಲ....ಒಪ್ಪಿದೆನಯ್ಯ, ಒಪ್ಪಿದೆ.

**ನಾರಾಯಣ :** ಏನು, ನಾನು ಕಳ್ಳನೇ ? ಯಾವ ಆಧಾರದ ಮೇಲೆ ನನ್ನ ಮೇಲೆ ಅಪವಾದ ಹೊರಿಸುತ್ತಾ ಇರೋದು ನೀವು ? ಇದು ವರೆಗೂ ಸಂಭಾವಿತನೆಂದೆನಿಸಿಕೊಂಡ ನಿರಪರಾಧಿಯನ್ನು ಕಳ್ಳ ಎಂದು ಹೇಳುವ ಧೈರ್ಯವಾದರೂ ನಿಮಗೆ ಹೇಗಾಯಿತೊ ತಿಳಿಯದು. ಹೀಗೆಲ್ಲ ಹೇಳಬೇಡಿರಿ. ನಾನು ಈ ಅವಮಾನ ಸಹಿಸಲಾರೆ.

**ನಾಗತ್ತೆ :** ಕಳ್ಳತನ ಮಾಡಿದರಾಗುತ್ತದೆ—ಕಳ್ಳ ಎಂದು ಹೇಳಿದರೆ ಯಾಕೆ ಕೋಪ ?

**ರಾಮು :** ಅದರಿಂದಲೆ ಆಗ ತಾನು ಮುಟ್ಟುವುದಿಲ್ಲ ಎಂದು ಕುಳಿತುಬಿಟ್ಟದ್ದು ! ಕಳ್ಳನ ಮನಸ್ಸು ಹುಳ ಹುಳ್ಳಗೆ........

**ಸೋಮು :** ಹೂಂ....ಈಗ ನನಗೆ ಗೊತ್ತಾಯಿತು. ಕಳೆದ ಮಳೆಗಾಲದಲ್ಲಿ ನನ್ನ ಕಿಸೆಯಲ್ಲಿದ್ದ ಐದು ರೂಪಾಯಿ ಹೇಗೆ ಮಾಯವಾಯಿತು—ಎಲ್ಲಿಗೆ ಹೋಯಿತು— ಅನ್ನೋದು ಈಗ ಗೊತ್ತಾಯಿತು. ಕಳ್ಳ ನಾಗರ ಹಾವು.

**ಕಮಲಮ್ಮ :** ಆದರೆ....ಆದರೆ....ನಾರಾಯಣನೇ ನೋಟನ್ನು ಕದ್ದದ್ದೆಂದು ಹೇಗೆ ಸಿದ್ಧವಾಯ್ತು ?.........ನಿಮ್ಮ ಮಾತಿನ ರಹಸ್ಯ ನನಗಿನ್ನೂ ತಿಳಿದಿಲ್ಲ.

**ದತ್ತ ಮಾನ :** ಅದರಲ್ಲೇನು ಗುಟ್ಟಿದೆ ? ಹೇಳುತ್ತೇನೆ ಕೇಳು. ( ಸೇವಕರಿಗೆ ) ನೀವೆಲ್ಲ ನಿಮ್ಮ ಕೈಗಳನ್ನು ಮೇಲಕ್ಕೆ

ಎತ್ತಿರಿ....ಈಗ ನೋಡು....ನಿನಗೆ ಏನಾದರೂ ಕಾಣಿ ಸುವುದೆ ?

**ಕಮಲಮ್ಮ :** ಹೌದು....ಅವರೆಲ್ಲರ ಬೆರಳಿಗೆ ಕಪ್ಪು ತಗಲಿದೆ.

**ಮೋಹನ:** ಆದರೆ ನಾರಾಯಣನ ಕೈಗೆ ಮಾತ್ರ ಮಸಿ ಹತ್ತಿಲ್ಲ, ಸ್ವಚ್ಛವಾಗಿದೆ.

**ದತ್ತ ಮಾವ :** ಹೌದು....ಈಗ ಗೊತ್ತಾಯಿತೆ ? ( ಎಲ್ಲರಿಗೂ ತಿಳಿಸುವಂತೆ ಮಾತನಾಡುವನು. ) ಬಲೆಯುನ್ನು ಬೀಸ ಲಾಗಿತ್ತು. ಹುಲಿ ಅನಾಯಾಸವಾಗಿ ಬಲೆಯಲ್ಲಿ ಬಿತ್ತು. ಆ ಪಾತ್ರೆಯ ಬುಡಕ್ಕೆ ಮಸಿಯನ್ನು ಹಚ್ಚಿದ್ದೆ. ಆದರೆ ಮೇಣಬತ್ತಿಯ ಪ್ರಕಾಶ ಬಹಳ ಮಂದವಾಗಿದ್ದರಿಂದ ಪಾತ್ರೆಗೆ ಕಪ್ಪು ಹಚ್ಚಿದ್ದು ಯಾರ ಕಣ್ಣಿಗೂ ಬೀಳಲಿಲ್ಲ ಅದಕ್ಕೆಂತಲೇ ಮೇಣಬತ್ತಿ ಯನ್ನು ಟೇಬಲ್ಲಿನ ಬುಡದಲ್ಲಿ ಇಟ್ಟಿದ್ದೆನು—ನಿಜ ವಾಗಿ ಕಳ್ಳನಾಗಿದ್ದವನು ಆ ಪಾತ್ರೆಯನ್ನು ಎಂದೂ ಮುಟ್ಟಲಿಕ್ಕಿಲ್ಲ ಎನ್ನುವುದು ಖಂಡಿತವಾಗಿಯೂ ನನಗೆ ಗೊತ್ತಿತ್ತು. ಅಷ್ಟೂ ಅಲ್ಲದೆ, ಕಳ್ಳನು ಅದನ್ನು ಮುಟ್ಟಿದ್ದರೆ ಅದರಲ್ಲಿದ್ದ ಕೋಳಿಮರಿ ಕೂಗೇ ಕೂಗುತ್ತಿತ್ತು. ಹೇಗಿದೆ ನನ್ನ ಉಪಾಯ ?

**ನಾರಾಯಣ :** ಎಂಥ ಉಪಾಯ ? ನಾನು ಕದ್ದಿದ್ದರಲ್ಲವೇ ನನ್ನನ್ನು ನೀವು ಕಳ್ಳನೆನ್ನುವುದು? ನಾನು ಬೇರೆಯವರ ಯಾವ ವಸ್ತುವನ್ನೂ ಇದು ವರೆಗೂ ತೆಗೆದು ಕೊಂಡಿಲ್ಲ. ಪ್ರಮಾಣಮಾಡಿ ಹೇಳುತ್ತೇನೆ....ನಾನು ಸುಳ್ಳು ಹೇಳುವುದಿಲ್ಲ. ಯಾವ ದೇವರ ಆಣೆಯನ್ನು ಮಾಡು ಎಂದರೂ ಮಾಡಲಿಕ್ಕೆ ನಾನು ಸಿದ್ಧ.

**ಸುಂದರರಾಯ :** ಅದೆಲ್ಲ ಇರಲಿ ; ಆಣೆಗೀಣೆ ಏನೂ ಬೇಕಾಗಿಲ್ಲ—ನಮಗೆ ಬೇಕಾದದ್ದು ಹಣ ಇನ್ನೊಂದು ಅವಕಾಶ ಕೊಡುತ್ತೇವೆ. ಅಷ್ಟರಲ್ಲಿ ಆ ನೂರು ರೂಪಾಯಿ ನೋಟನ್ನು ಎಲ್ಲಿ ಬಚ್ಚಿಟ್ಟಿದ್ದಿ ಎನ್ನುವುದನ್ನು ಹೇಳಿಬಿಡು. ನೀನು ಈಗ ಹೇಳದಿದ್ದರೆ ನಾವು ಪೋಲೀಸರನ್ನು ಕರೆಯಿಸಿ ನಿನ್ನ ಬಟ್ಟೆಬರೆಗಳನ್ನೆಲ್ಲ ಶೋಧಿಸಬೇಕಾಗುವುದು. ಅಷ್ಟನ್ನೆಲ್ಲ ಮಾಡುವುದಕ್ಕಿಂತ ಸುಮ್ಮನೆ ನಿಜ ಸಂಗತಿಯನ್ನು ಹೇಳಿಬಿಡು. ಗುಟ್ಟೆಲ್ಲ ರಟ್ಟಾಗಿಬಿಟ್ಟಿದೆ. ಈಗ ಸುಳ್ಳಾಡಿ ಪ್ರಯೋಜನವಿಲ್ಲ.

**ನಾಗತ್ತೆ :** ಮಾಡೋದಂತೂ ಮಾಡಿಯಾಗಿದೆ........ಇನ್ನು ಮುಚ್ಚುಮರೆ ಯಾಕೆ ? ಸತ್ಯಕ್ಕೆ ಸಾವಿಲ್ಲ—ಸುಳ್ಳಿಗೆ ಸುಖವಿಲ್ಲ. ಸತ್ಯವನ್ನು ಹೇಳಿಬಿಡು.

**ನಾರಾಯಣ :** ( ನಾಗತ್ತೆಗೆ ) ಸರಿ ತಪ್ಪುಗಳನ್ನು ಕಂಡುಹಿಡಿಯಲಿಕ್ಕೆ ನಿಮಗೆ ಅಧಿಕಾರ ಎಲ್ಲಿದೆ ? ಸ್ವಾಮಿ, ನಾನು ನಿಮಗೆ ಮೊದಲೇ ಹೇಳಿದ್ದೇನೆ....ನಾನು ತೆಗೆದಿಲ್ಲಾ. ಪೋಲೀಸರಿಂದ ಹುಡುಕಿಸುವುದಾದಲ್ಲಿ ನೀವು ಇಲ್ಲಿದ್ದ ಎಲ್ಲರ ಪೆಟ್ಟಿಗೆಗಳನ್ನೂ ಹುಡುಕಿಸಬೇಕು. ನಾಗತ್ತೆ ಯಾಕೆ ತೆಗೆದಿರಬಾರದು ? ನೋಡೋದಕ್ಕೆ ಸಂಭಾವಿತರಾಗಿದ್ದು, ಬಾಯಲ್ಲಿ ವೇದಾಂತ ಹೇಳಿದ ಕೂಡಲೇ ಎಲ್ಲರೂ ಸಭ್ಯರು ಎಂದು ಹೇಳಲು ಬರುವುದಿಲ್ಲ.

**ನಾಗತ್ತೆ** ∘ ಅಯ್ಯೋ ಶಿವನೆ ! ನನಗೆ ಹೆಸರಿಡುತ್ತೀಯಾ ? ... ನಿನ್ನ ನಾಲಿಗೆ ಸುಲಿದು ಹೋಗಲಿ ?

**ಸುಂದರರಾಯ :** ಎಲ್ಲರೂ ಸುಮ್ಮನಿರಿ. ನಾರಾಯಣ, ಈಗ ನಾನು ನಿನಗೆ ಕೊಟ್ಟ ಒಂದು ನಿಮಿಷದ ಅವಧಿ ಮುಗಿಯಿತು. ಈಗ ಕೊನೆಯದಾಗಿ ಕೇಳುತ್ತೇನೆ—ನೋಟನ್ನು ಎಲ್ಲಿ ಮುಚ್ಚಿಟ್ಟಿದ್ದಿ ಹೇಳಿಬಿಡು.

**ನಾರಾಯಣ :** ದೇವರ ಸಾಕ್ಷಿಯಾಗಿಯೂ ಹೇಳುತ್ತೇನೆ—ನನಗೆ ನೋಟಿನ ವಿಷಯ ಗೊತ್ತೇ ಇಲ್ಲ.

**ನಾಗತ್ತೆ :** ಕಳ್ಳತನ ಮಾಡೋದಲ್ಲದೆ ಸುಳ್ಳನ್ನೂ ಹೇಳುತ್ತಾನೆ ಘಟಿಂಗ.

**ಸುಂದರರಾಯ :** ಕಮಲಾ, ಪೋಲೀಸರಿಗೆ ಫೋನ್ ಮಾಡು.

**ಕಮಲಮ್ಮ:** ಪೋಲೀಸ್ ಸ್ಟೇಶನ್ನಿನ ಫೋನ್ ನಂಬರ್ ಎಷ್ಟು?

**ಸುಂದರರಾಯ :** ಅಲ್ಲಿಯೇ ಫೋನಿನ ಪುಸ್ತಕ ಇದೆ....ಅದರಲ್ಲಿ ನೋಡು.

( ಕಮಲಮ್ಮ ಫೋನ್ ಗೈಡನ್ನು ತೆಗೆದುಕೊಂಡು ಪುಟವನ್ನು ತಿರುಗಿಸುವಳು ; ಪುಟಗಳ ನಡುವೆ ಇದ್ದ ಲಕೋಟೆಯನ್ನು ಕಂಡು ತಿರುತಿರುಗಿ ಪರೀಕ್ಷಿಸಿ ಸಂಭ್ರಮದ ಭಾವದಿಂದ ಅದನ್ನು ತೆರೆದು ನೋಡುವಳು. )

**ಕಮಲಮ್ಮ :** ಅರೆ ಇದೇನಿದು ! ( **ನೂರು ರೂಪಾಯಿಯ ನೋಟು ಹೊರತೆಗೆದು**) ನೂರು ರೂಪಾಯಿ ನೋಟು !

**ಸುಂದರರಾಯ :** ನೋಟು ? ಎಲ್ಲಿ ? ಇದೇನು ವಿಚಿತ್ರ !

**ಕಮಲಮ್ಮ :** ಈ ಪುಸ್ತಕದಲ್ಲಿ ಇದನ್ನು ಇಟ್ಟವರು ಯಾರು ?

**ಮೋಹನ :** ( **ಲಕೋಟೆಯನ್ನು ಕಮಲಮ್ಮನಿಂದ ತೆಗೆದುಕೊಂಡು ನೋಡಿ** ) ಹಾಂ! ಹೌದಮ್ಮ, ಈಗ ನೆನಪಿಗೆ ಬಂತು—ಇದನ್ನು ನಾನೇ ಇಟ್ಟಿದ್ದೆ ಈ ಪುಸ್ತಕದಲ್ಲಿ.

**ಸುಂದರರಾಯ :** ನೀನು ಅಲ್ಲಿಟ್ಟಿದ್ದೆಯಾ ?

**ಮೋಹನ :** ಹೌದಪ್ಪಾ ...ನಿನ್ನೆ ಸಂಜೆ ನಮ್ಮ ಕ್ಲಾಸಿನವರ ಫುಟ್‌ಬಾಲ್ ಪಂದ್ಯಾಟ ಇರಲಿಲ್ಲವೆ? ಅದಕ್ಕೋಸ್ಕರ ನನ್ನ ಗೆಳೆಯರಿಬ್ಬರಿಗೆ ನಿನ್ನೆ ಮಧ್ಯಾಹ್ನ ಫೋನ್ ಮಾಡಿದ್ದೆನು. ಆಗ ಅವರ ಫೋನ್ ನಂಬರುಗಳಿದ್ದ ಪುಟಗಳನ್ನು ಗುರುತಿಸುವುದರ ಸಲುವಾಗಿ ಯಾವುದಾದರೂ ಕಾಗದ ಇದೆಯೋ ಎಂದು ನೋಡುತ್ತಿರುವಾಗ ಆಗಲೇ ಈ ಲಕೋಟೆ ಅಲ್ಲೇ ಕೈಗೆ ಸಿಕ್ಕಿತು. ಇದನ್ನು ಪುಟಗಳ ಗುರುತಿಗಾಗಿ ಪುಸ್ತಕಗಳ ನಡುವೆ ಇಟ್ಟೆನು. ಇದರ ಒಳಗೆ ಏನಿದೆ ಎನ್ನುವುದನ್ನು ನಾನು ನೋಡಲೇ ಇಲ್ಲ. ಒಟ್ಟಿನಲ್ಲಿ ಈ ಲಕೋಟೆಯ ನೆನಪೇ ಉಳಿಯಲಿಲ್ಲ. [ **ನೆಟ್ಟ ದಿಟ್ಟಿಯಲ್ಲಿ ನೋಡುತ್ತಿರುವ ನಾರಾಯಣನನ್ನು ನೋಡಿ** ] ಹಾ ! ನಾರಾಯಣ, ನೀನು ನನ್ನನ್ನು ಕ್ಷಮಿಸುವೆಯಲ್ಲವೆ? ಈಗ ಈ ಲಕೋಟೆ ಸಿಗದೆ ಇದ್ದಲ್ಲಿ ನಿಜವಾಗಿಯೂ ನಿನ್ನನ್ನು ಕಳ್ಳನೆಂದು ತೀರ್ಮಾನಿಸಿ ಬಿಡುತ್ತಿದ್ದೆವು. ಪಾಪ, ನನ್ನ ಒಂದು ಸಣ್ಣ ತಪ್ಪಿನಿಂದ ಎಂಥ ದೊಡ್ಡ ಅವಮಾನವಾಗುತ್ತಿತ್ತು ನಿನಗೆ....ನನ್ನದು ತಪ್ಪಾಯಿ ತಪ್ಪಾ....ಮಹಾ ಅಪರಾಧವಾಯ್ತು.

**ನಾರಾಯಣ :** ಆದದ್ದಾಯಿತು, ನೀನು ಚಿಂತಿಸಬೇಡ ಮೋಹನ. ನಿಜಸಂಗತಿ ಕೊನೆಗೆ ಹೊರಗೆ ಬಂದೇ ಬರುವುದೆಂದು ನನಗೆ ನಿಶ್ಚಯವಾಗಿ ಗೊತ್ತಿತ್ತು.

**ಕಮಲಮ್ಮ :** ಒಟ್ಟಿನಲ್ಲಿ ನೋಟು ದೊರೆತು ಯಾರೂ ಅಪರಾಧಿಗಳಲ್ಲ ಎಂಬುದು ಖಾತ್ರಿಯಾಯಿತಲ್ಲ? ಅದೇ ಆನಂದ.

**ಮೋಹನ :** ಆದರೆ ಒಂದು ವಿಷಯ ಮಾತ್ರ ಇನ್ನೂ ತಿಳಿದಿಲ್ಲ ವಲ್ಲ !

**ಕಮಲಮ್ಮ :** ಯಾವುದು ?

**ಮೋಹನ :** ನಾರಾಯಣನ ಕೈಗೆ ಕಪ್ಪುಕಾಡಿಗೆ ಅದು ಹೇಗೆ ತಗಲಲಿಲ್ಲ ಎನ್ನುವುದು !

**ಸುಂದರರಾಯ :** ಅವನು ಪಾತ್ರೆಯನ್ನು ಮುಟ್ಟಿದರಲ್ಲವೆ ಅವನ ಕೈ ಕಪ್ಪಾಗುವುದು ?

**ನಾರಾಯಣ :** ನಾನು ಪಾತ್ರೆಯನ್ನು ಮುಟ್ಟಿದ್ದೇನೆ.

**ಸುಂದರರಾಯ :** ಏನು, ಪಾತ್ರೆಯನ್ನು ಮುಟ್ಟಿದ್ದೆಯಾ ? ಆದರೂ ಕಪ್ಪಾಗಲಿಲ್ಲವೆ ? ಅದು ಹೇಗೆ !

**ನಾರಾಯಣ :** ನಾನು ಪಾತ್ರೆಯನ್ನು ಮುಟ್ಟಿದ್ದೇನೆ....ಆದರೆ ನೀವು ಹೇಳಿದ ಸ್ಥಳದಲ್ಲಿ ಅಲ್ಲ. ಆ ಕೋಣೆಯಲ್ಲಿ ನಾನು ಹೋದಾಗ ಒಂದು ವಿಶೇಷವನ್ನು ನಾನು ಮಾಡಿದ್ದೆ.

**ಮೋಹನ :** ಏನು ! ಏನು ?

**ನಾರಾಯಣ :** ನನಗೊಂದು ವಿಚಾರ ಹೊಳೆಯಿತು. ಆ ಕತ್ತಲೆಯಲ್ಲಿ ಪಾತ್ರೆಯ ಬುಡದಲ್ಲಿ ಕುಳಿತು, ಕಳ್ಳ ನನ್ನು ಕಂಡು ಕೂಗುವ ಕೋಳಿಮರಿ ಅದು ಎಂತಹ ದಿರಬಹುದೆಂಬ ಕುತೂಹಲ ನನ್ನಲ್ಲಿ ಸಹಜವಾಗಿ ಆವರಿಸಿತು. ಆ ಕೋಳಿಮರಿಯನ್ನು ಕಾಣಬೇಕು ಎಂದು ಪಾತ್ರೆಯನ್ನು ಮೇಲೆ ಮಾಡಿ ಪಾತ್ರೆಯ ಬುಡದಲ್ಲಿ ಬಗ್ಗಿ ನೋಡಿದೆ.

**ದತ್ತ ಮಾವ :** (ವಿಷಯ ಗೊತ್ತಿದ್ದರಿಂದ ನಗುತ್ತ) ಮತ್ತು ಅಲ್ಲಿದ್ದ ಆ ಪ್ರಾಣಿ ಯಾವ ರೂಪದ್ದಿತ್ತು ?

**ನಾರಾಯಣ :** ಅದನ್ನು ನಾನು ಹೇಳಲಾರೆ ಸ್ವಾಮಿ.

**ಸುಂದರರಾಯ :** ಯಾಕೆ ? ಬಹಳ ವಿಚಿತ್ರವಾಗಿತ್ತೆ ?

**ನಾರಾಯಣ :** ಯಾಕೆಂದರೆ ಆ ಪಾತ್ರೆಯ ಬುಡದಲ್ಲಿ ಕೋಳಿ ಮರಿಯೇ ಇರಲಿಲ್ಲ !

( ಎಲ್ಲರೂ ಚಕಿತರಾಗುವರು. )

**ದತ್ತ ಮಾವ :** ಏನಿದ್ದರೂ ಈ ಘಟನೆಯಿಂದ ನೂರು ರೂಪಾಯಿ ನೋಟು ಈ ರಾತ್ರಿಯೊಳಗಾಗಿ ಸಿಕ್ಕಿತಲ್ಲ, ಅದೇ ಸಂತೋಷ. ( ಬಂದ ಜನರಿಗೆ ) ಇನ್ನು ನೀವು ಹೊರಡಬಹುದು.

( ತೆರೆ )

## — ಇದೇ ಲೇಖಕರ ಇತರ ಕೃತಿಗಳು —

| | |
|---|---|
| ಆ ರಾತ್ರಿ ( ಮೂರಂಕಿನ ನಾಟಕ ) | ೦–೧೪–೦ |
| ದೇವಮೂರ್ತಿ ( ಏಕಾಂಕ ) | ೦– ೬ –೦ |
| ನಟನಾಯಕ ಮತ್ತು ಒಂದಕ್ಕೆರಡು ( ಏಕಾಂಕಗಳು ) | ೦–೧೨–೦ |
| ವಿನೋಬಾ | ೦– ೬ –೦ |
| ಕ್ರಾಂತಿಯ ಕಿಡಿಗಳು | ೦– ೨ –೦ |

ಬರಲಿವೆ :—

ಕುತೂಹಲ

ಜೀವನ–ಸಂಜೀವನಿ

ಸುಖ ಸಂಸಾರ

ದೊರೆಯುವ ಸ್ಥಳ

ಸಾಹಿತ್ಯ ಭಂಡಾರ, ಹುಬ್ಬಳ್ಳಿ